# ಸಿದ್ಧಗಂಗಾ

ಸಂಪುಟ-29. ಸಂಚಿಕೆ-7. ಜುಲೈ-1993.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಚಾಕು ಚೂರಿಗಳೆಲ್ಲ ಮೂಕವಾಗವೆ ತಂದೆ
ಸ್ಮರಿಸಿದರೆ ಅನುದಿನವು ತನಚರಣ । ಶ್ರೀಗುರುವೇ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಎನ್ನ ಮಾನಾಪಮಾನ ನಿನ್ನ ಕೃಪೆಯೆಂಬೆನಾ
ಚೆನ್ನ ಮೂರುತಿಸ್ವಾಮಿ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ತಾಯಿ ಮಾಡಿದ ಸೇವೆ ತಂದೆ ಮಾಡಿದ ಪುಣ್ಯ
ನಿನ್ನ ಕೃಪೆಯಾಗಿ ಪೊರೆದಿಹವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

‡‡ + ‡‡ ÷ ‡‡

—ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|



# ಶ್ರೀವಾಣಿ



ಎರಡು ವರ್ಷಗಳಿಂದ ಒಬ್ಬ ವಿಚಿತ್ರ ವ್ಯಕ್ತಿ ಶ್ರೀಮಠಕ್ಕೆ ಬಂದು ಹೋಗುತ್ತಿದ್ದಾನೆ. ಯಾವೂರು? ಏನುಮಾಡುತ್ತಾನೆ? ಯಾವ ಉದ್ದೇಶಕ್ಕಾಗಿ ಬರುತ್ತಿದ್ದಾನೆ ಎಂಬುದು ಏನು ತಿಳಿಯದು. ನಾವು ಕಾರ್ಯಾರ್ಥವಾಗಿ ಎಲ್ಲಿಗಾದರೂ ಪ್ರಯಾಣ ಬೆಳೆಸುವಾಗ ಇನ್ನೇನು ನಮ್ಮ ವಾಹನ ಹೊರಡಬೇಕೆನ್ನುವಾಗ ಹಾಜರಾಗುತ್ತಾನೆ. "ನಾವು ಒಂದಾಗಿರಬೇಕು. ಅಭಿಮಾನ ಬಿಡಬಾರದು. ಪರಸ್ಪರ ಹೊಂದಿಕೊಂಡು ಹೋಗಬೇಕು" ಎನ್ನುತ್ತಾನೆ. ಅವನು ತೊಟ್ಟಿರುವ ಬಟ್ಟೆಗಳು ತುಂಬಾ ಕೊಳಕು. ಆದರೆ ಅವನ ಬಾಯಲ್ಲಿ ಎಂದೂ ಒಂದು ಕೊಳಕು ಮಾತು ಬಂದಿಲ್ಲ. ಯಾರೊಂದಿಗೂ ಮಾತಾಡುವುದಿಲ್ಲ. ಶ್ರೀಮಠದಲ್ಲಿ ಪ್ರಸಾದವನ್ನೂ ಸ್ವೀಕರಿಸಿದ್ದಿಲ್ಲ. ಸುಮ್ಮನೆ ಎಲ್ಲರ ಮಧ್ಯೆ ಇದ್ದು ಎಲ್ಲರಂತಿರುವುದಿಲ್ಲ. ನಿರ್ಲಿಪ್ತನೆನ್ನಿಸುವುದಿಲ್ಲ. ಲಿಪ್ತನೂ ಅಲ್ಲವೆನಿಸುತ್ತದೆ. ಮುಸ್ಲಿಂ ಧರ್ಮಾನುಯಾಯಿ ಎಂಬುದಾಗಿ ಯಾರೋ ತಿಳಿಸಿದರು. ನಮ್ಮನ್ನು ಕಂಡಾಗಲೆಲ್ಲ ಒಂದೇ ಮಾತು "ನಾವು ಒಂದಾಗಿರಬೇಕು. ಅಭಿಮಾನ ಬಿಡಬಾರದು" ಎಂದೇ ಹೇಳುತ್ತಾನೆ. ಒಮ್ಮೊಮ್ಮೆ ಚಿಂತಿಸುತ್ತೇನೆ. ಶರಣರು ಲೋಕದಂತೆ ಬಾಳರು. ಲೋಕದಂತೆ ಬಾರರು ಎಂಬಮಾತು. ಇಂಥವರನ್ನೂ, ಇಂಥವರ ವಿಚಿತ್ರ ಸ್ವಭಾವವನ್ನು ಕಂಡೆ ಆಡಿದ್ದಿರಬೇಕು ಎನಿಸುತ್ತದೆ. ವಿಚಿತ್ರ ವ್ಯಕ್ತಿ ಯಾರೊಬ್ಬರಿಗೂ ತೊಂದರೆ ಮಾಡುವುದಿಲ್ಲ. ಒಂದು ಕೆಟ್ಟಮಾತು ಬಾಯಿಂದ ಬರುವುದಿಲ್ಲ. ತಾನಾಯಿತು, ತನ್ನ ದಾರಿಯಾಯಿತು. "ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಲೋಕ ಹಿತಾರ್ಥ" ಎಂಬಂತೆ ಅವನ ನಡೆ-ನುಡಿ. ದಿನವಹಿ ಶ್ರೀ ಮಠಕ್ಕೆ ಬರುವವರು ಸಾವಿರಾರುಮಂದಿ. ಅವರೆಲ್ಲ ಸಾವಿರಾರು ಉದ್ದೇಶಗಳಿಂದಲೇ ಬರುತ್ತಾರೆ. ಸೀಟು ಬೇಕು, ಕೆಲಸ ಬೇಕು, ಶಿಫಾರಸು ಕಾಗದ ಬೇಕು, ವರ್ಗಾವಣೆ ರದ್ದುಮಾಡಬೇಕು ಅಥವಾ ಬದಲು ಮಾಡಿಸಿಕೊಳ್ಳಬೇಕು, ವಿದ್ಯಾರ್ಥಿ ನಿಲಯಕ್ಕೆ ಪ್ರವೇಶಬೇಕು. ಜಗಳ ಬಗೆ ಹರಿಸಿಕೊಳ್ಳಬೇಕು. ಯಂತ್ರ ಕಟ್ಟಿಸಿಕೊಳ್ಳಬೇಕು. ದಾರ ಹಾಕಿಸಿಕೊಳ್ಳಬೇಕು, ಕಾರ್ಯಕ್ರಮಕ್ಕೆ ಬರಬೇಕು. ಹೌದು ಈಎಲ್ಲ 'ಬೇಕು'ಗಳ ಮಧ್ಯೆ "ನಾವು ಒಂದಾಗಿರಬೇಕು ಎಂಬ ಈ ವಿಚಿತ್ರ ವ್ಯಕ್ತಿಯನ್ನು ಕಂಡಾಗ 'ಅಭಿಮಾನ ಬಿಡಬಾರದು' ಎನ್ನಿಸುತ್ತದೆ.

# ನಮ್ಮ ದೈವಭಕ್ತಿ

ಇಂಡಿಯಾ ದೇಶದ ಜನರು ಸ್ವಾಭಾವಿಕವಾಗಿ ದೈವಭಕ್ತರೆಂದು ಒಂದು ಭಾವನೆ ಸಾಮಾನ್ಯವಾಗಿದೆ. ಅದನ್ನೂ ನಾವು ಪರೀಕ್ಷೆ ಮಾಡಬೇಕಾದದ್ದೆ.

ನಮ್ಮ ಭಕ್ತಿಯಲ್ಲಿ ಪ್ರೀತಿ ಎಷ್ಟು ಭಾಗ ? ಪ್ರೀತಿಯೂ ಭೀತಿಯೂ ಒಂದೇ ಅಲ್ಲ. ಬಹುಮಂದಿಯ ದೈವಭಕ್ತಿ ಕೇವಲ ದೈವಭೀತಿ, ಎಷ್ಟೋ ಜನಕ್ಕೆ ದೇವಸ್ಥಾನ ಒಂದು ಅಂಗಡಿ. ಅಲ್ಲಿ ದೇವರೊಂದಿಗೆ ವ್ಯಾಪಾರ. "ದೇವರೇ ನೀನು ನನಗೆ ಮಗುವನ್ನು ಕೊಟ್ಟರೆ, ನಾನು ನಿನಗೆ ಬೆಳ್ಳಿಯ ತೊಟ್ಟಿಲನ್ನು ಕೊಡುತ್ತೇನೆ.' "ನೀನು ನನಗೆ ಸಂಬಳ ಹೆಚ್ಚು ಮಾಡಿಸಿದರೆ, ನಾನು ನಿನಗೆ ಧೂಪಾರ್ತಿ ಎತ್ತಿಸುತ್ತೇನೆ." "ನೀನು ನನಗೆ ವ್ಯಾಪಾರದಲ್ಲಿ ಲಾಭ ಕೊಡಿಸಿದರೆ, ನಾನು ನಿನಗೆ ದೀಪಾರಾಧನೆ ಮಾಡಿಸುತ್ತೇನೆ. ಅಥವಾ 'ದೇವರೇ ನನ್ನ ಗುಟ್ಟು ಹೊರಕ್ಕೆ ಬೀಳದಂತೆ ನೀನು ಮುಚ್ಚಿಟ್ಟರೆ, ನಿನಗೆ ನಾನು ಊರೆಲ್ಲಾ ಮೆರವಣಿಗೆ ಮಾಡಿಸುತ್ತೇನೆ. ನನ್ನ ನೆರೆಮನೆಯವನ ಮೀಸೆ ನೀನು ಉದಿರಿಸಿದರೆ ನನ್ನ ತಲೆಕೂದಲನ್ನೆಲ್ಲಾ ನಿನಗೆ ಮುಡಿಪು ಕೊಡುತ್ತೇನೆ–ಈ ರೀತಿ ಮಯ್ಯಿಗೆ ಮಯ್ಯಿ ಸರಕಿಗೆ ಪ್ರತಿಸರಕು, ಬಹುಮಂದಿಯ ಭಕ್ತಿ. ಒಬ್ಬ ದೇವರು ಒಪ್ಪಂದಕ್ಕೆ ಬಾರದೆ ಹೋದರೆ ಇನ್ನೊಬ್ಬ ದೇವರ ಹತ್ತಿರ ಹೋಗುತ್ತಾರೆ ಇಂಥವರು ನಂಜುಂಡೇಶ್ವರನು ತಪ್ಪಿದರೆ, ವೆಂಕಟೇಶ್ವರನಿರುತ್ತಾನೆ. ಅವರ ವ್ಯಾಪಾರಕ್ಕೆ, ಅವರ ಅಂತರಂಗದಲ್ಲಿರುವುದು ಶುದ್ಧ ಪ್ರೀತಿಯಲ್ಲ. ಅದು ಭೀತಿ ಮೂಲವಾದ ಪ್ರೀತಿ, ದೇವರು ನಮ್ಮಿಷ್ಟಕ್ಕೆಲ್ಲಿ ವಿಘ್ನ ಮಾಡಿಯಾನೋ, ನಮ್ಮ ಒಳಸಂಚನ್ನು ಆವನು ಎಲ್ಲಿ ಹೊರಕ್ಕೆ ತಂದು ಬಿಟ್ಟಾನೋ ಎಂಬ ಭೀತಿ ಮೂಡಿಸಿದ ಪ್ರೀತಿ, ಬಹು ಜನದ್ದು.

ನಿಜವಾದ ಪ್ರೀತಿ ಯಾವ ಪ್ರತಿಫಲವನ್ನು ಬೇಡುವುದಿಲ್ಲ. ತಾಯಿ ಮಗುವಿನಿಂದ ಏನು ಪ್ರತ್ಯುಪಕಾರವನ್ನು ಬಯಸುತ್ತಾಳೆ? ಮಗುವನ್ನು ನೋಡಿದ ಮಾತ್ರದಿಂದಲೇ ತಾಯಿಗೆ ಹೇಗೆ ಪ್ರೀತಿಯುಂಟಾಗುತ್ತದೆಯೋ, ಬೆಳಕು ಹರಿದಾಗ ತೋಟದ ಪಕ್ಷಿಗಳಿಗೆ ಹೇಗೆ ಹರ್ಷವುಂಟಾಗುತ್ತದೆಯೋ, ಒಳ್ಳೆಯ ಸಂಗೀತವನ್ನು ಕೇಳಿದಾಗ, ನಮಗೆ ಹೇಗೆ ಮೈಮರೆಯುತ್ತದೆಯೋ, ಒಂದು ಮಹಾ ಸೌಂದರ್ಯವನ್ನು ನೋಡಿದಾಗ, ನಮ್ಮ ಮನಸ್ಸು ಹೇಗೆ ಬೆರಗುತ್ತದೆಯೋ, ಹಾಗೆ ದೇವರನ್ನು ಧ್ಯಾನಿಸಿದಾಗ, ನಮ್ಮ ಮನಸ್ಸು ಬೇರೆ ಯಾವುದನ್ನೂ ನೆನೆಯದೆ, ಆನಂದವನ್ನು ಅನುಭವಿಸಿ, ಆ ನಿರ್ಮಲವಾದ ಆನಂದದಲ್ಲಿಯೇ ಕಲೆತು ಹೋದರೆ, ಆ ಮನಸ್ಸಿನದು ನಿಜವಾದ ಭಕ್ತಿ. ಇಂಥ ಭಕ್ತಿ ಸುಲಭವಲ್ಲ. ಯಾರಿಗೂ ಎಲ್ಲಿಯೂ ಸುಲಭವಲ್ಲ. ಅದು ಬಹುದಿನಗಳ ಅಭ್ಯಾಸದಿಂದ ಬರತಕ್ಕದ್ದು. ಅದಕ್ಕೆ ಬೇಕಾದ್ದು ನಿಜವಾದ ವೈರಾಗ್ಯ ಮತ್ತು ಧರ್ಮಚರ್ಯೆ. ಸ್ವಂತ ಸುಖದ ಯೋಚನೆಯನ್ನು ಹದ್ದಿನಲ್ಲಿರಿಸುವುದು, ಮತ್ತು ಜಗತ್ಸೃಷ್ಟಿಯಲ್ಲಿ ಕಾಣಬರುವ ಭಗವಂತನ ಅದ್ಭುತಕ್ರಿಯೆಗಳನ್ನು ಕುರಿತು ಚಿಂತಿಸುವುದು, ಮತ್ತು ಜಗಜ್ಜೀವನದಲ್ಲಿ ಹೊಂದಿಕೊಂಡು ಬಾಳುವುದು.

ಜಗಜ್ಜೀವನದಲ್ಲಿ ಬೆರೆಯುವುದು ಎಂಬುದೇ ಆತ್ಮವಿಶ್ವಾಸ-ಅದೇ ಧರ್ಮದ ರಹಸ್ಯ ಮನೆ, ಕುಲ, ಸಮಾಜ, ರಾಜ್ಯ – ಮೊದಲಾದ ಎಲ್ಲಾ ಏರ್ಪಾಟುಗಳೂ ಆ ಆತ್ಮವಿಕಾಸದ ಅಭ್ಯಾಸಕ್ಕಾಗಿಯೇ.

–ಡಿ. ವಿ. ಜಿ. (ಬಾಳಿಗೊಂದು ನಂಬಿಕೆ)

# ಶ್ರೀ ಸಿದ್ಧಲಿಂಗೇಶ್ವರ ವಚನ



ಅನೃತ ಅನಾಚಾರ ಅನ್ಯಹಿಂಸೆ
ಪರಧನ ಪರಸ್ತ್ರೀ ಪರನಿಂದೆಯ ಬಿಟ್ಟು
ಲಿಂಗ ನಿಷ್ಠೆಯಿಂದ ಶುದ್ಧಾತ್ಮನಾಗಿರಬಲ್ಲರೆ
ಮಾಹೇಶ್ವರ ಸ್ಥಲವಿಹೆಂಬೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ ।

ಸಾಂಸಾರಿಕ ಎಲ್ಲ ಬಂಧನಗಳನ್ನು ಹರಿದುಕೊಂಡು ಜೀವನು ದೇವನೊಡನೆ ಒಂದಾಗುವ ಷಟ್‌ಸ್ಥಲದ ಹಾದಿಯಲ್ಲಿ ಅಂತಃಕರಣ ಪರಿಶುದ್ಧಿಯು ಒಂದು ಮಹತ್ವಸ್ಥಾನ ಪಡೆದುಕೊಂಡಿರುವುದು. ಜನ್ಮ ಜನ್ಮಾಂತರವಾದ ಸಂಸ್ಕಾರಗಳು ಹೃದಯದಲ್ಲಿ ನೆಲೆಯಾಗಿ ನಿಂತುಕೊಂಡಿರುವತನಕ ಜೀವ ದೇವರಲ್ಲಿಯ ವಿಯೋಗ ತಪ್ಪುವುದಿಲ್ಲ. ಆ ಪಾಪ ಸಂಸ್ಕಾರಗಳೇ: ಅಸತ್ಯ, ಅನಾಚಾರ, ಹಿಂಸೆ, ಪರಧನ, ಪರಸ್ತ್ರೀಹರಣ, ಪರದ್ರೋಹ ಮುಂತಾದವುಗಳ ರೂಪದಲ್ಲಿ ಅಭಿವ್ಯಕ್ತವಾಗುವುವು. ಅವೆಲ್ಲವೂ ಲಿಂಗನಿಷ್ಠೆಯಿಂದ ನಿರ್ನಾಮವಾಗುವವು. ಭಕ್ತಿಸ್ಥಲದಲ್ಲಿ ಶ್ರದ್ಧೆಯ ರೂಪದಲ್ಲಿ ವಿಕಾಸಹೊಂದಿದ ಆತ್ಮಶಕ್ತಿಯು ಅದರ ಮುಂದಿನ ಸ್ಥಲದಲ್ಲಿ ನಿಷ್ಠೆಯ ರೂಪತಾಳುವುದು. ಆಗ ಆ ಸ್ಥಲವು 'ಮಹೇಶ" ಎಂಬ ಹೆಸರು ಪಡೆಯುವುದು. ಮಹೇಶನಲ್ಲಿ ಪ್ರಕೃತಿಗಳು ನಷ್ಟವಾಗಿ ಶಿವಗುಣಗಳು ಚಿಗುರೊಡೆದು ನಿಂತುಕೊಳ್ಳುವುವು.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ– ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ- ಎಡೆಯೂರು-ಗದಗ)

**ಸಿದ್ಧಗಂಗಾ ಮಾಸ ಪತ್ರಿಕೆ**
**ಶ್ರೀ ಸಿದ್ಧಗಂಗಾ ಮಠ - 572 104**
ತುಮಕೂರು ಜಿಲ್ಲೆ

**ಡಾ|| ಎಂ. ಎನ್. ಚನ್ನಬಸಪ್ಪ**
ಪ್ರಧಾನ ಕಾರ್ಯದರ್ಶಿಗಳು
ಹಳೆಯ ವಿದಾರ್ಥಿ ಸಂಘ

* * *

**ಪ್ರೊ|| ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು

* * *

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

* * *

**ಬಿ. ವೀರಭದ್ರಯ್ಯ**
**ಪಿ. ಎಸ್. ಚಂದ್ರಶೇಖರಯ್ಯ**
**ಎಂ. ರೇಣುಕಾರಾಧ್ಯ**
ಸಂಪಾದಕ ಮಂಡಳಿ

* * *

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**
ಮುದ್ರಕರು

* * *

**ಶ್ರೀ ಸಿದ್ಧಗಂಗಾಕ್ಷೇತ್ರ**
ಪ್ರಕಟಣೆಯ ಸ್ಥಳ

**ಚಂದಾ ವಿವರ**
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಬಸವಣ್ಣ ದಲಿತ ವಿರೋಧಿಯೇ?

ಇತ್ತೀಚೆಗೆ ವಿಚಾರವಂತರೆನಿಸಿಕೊಂಡ ಕೆಲವು ಮಿತ್ರರು ಬಸವಣ್ಣ ದಲಿತ ವಿರೋಧಿಯಾಗಿದ್ದನೆಂಬಂತೆ ಮಾತನಾಡುತ್ತಿದ್ದಾರೆ, ವಿಚಾರ ಸಂಕಿರಣಗಳಲ್ಲಿ ವಾದ ಮಂಡಿಸುತ್ತಿದ್ದಾರೆ. ಬಸವಣ್ಣನವರ ಬಗ್ಗೆ ವಿಚಾರ ಮಂಥನ ನಡೆಯುವುದು ಅವಶ್ಯಕ. ಅವರು ಬಿಟ್ಟು ಹೋಗಿರುವ ವಿಚಾರಗಳನ್ನು ಚರ್ಚಿಸುವುದು ಆರೋಗ್ಯಕರ. ಯಾವುದೇ ಮಹಾನುಭಾವರನ್ನು ಕುರಿತು, ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಪ್ರಜಾಪ್ರಭುತ್ವ ಜೀವನ ವ್ಯವಸ್ಥೆಯಲ್ಲಿ ಪ್ರತಿಯೊಬ್ಬರಿಗೂ ಹಕ್ಕಿದೆ. ಆದರೆ ಅಭಿಪ್ರಾಯಗಳನ್ನು ವ್ಯಕ್ತಮಾಡುವಾಗ ಸಮಗ್ರ ಪರಿಶೀಲನೆ ಅಗತ್ಯವಾಗುತ್ತದೆಯಲ್ಲವೆ.? ಬಸವಣ್ಣನವರು ದಲಿತ ವಿರೋಧಿಯಾಗಿದ್ದರು ಎಂಬುದಕ್ಕೆ ಆಧಾರಗಳನ್ನು, ಉಲ್ಲೇಖಿಸಬೇಕಾಗುತ್ತದೆ ತಾನೆ. ಅವರ ವಚನಗಳಲ್ಲಿ ಏನಾದರೂ ಅಂತಹ ಸುಳಿವುಗಳಿವೆಯೇ "ಕೊಲ್ಲುವವನೆ ಮಾದಿಗ ಹೊಲಸು ತಿಂಬುವನೆ ಹೊಲೆಯ" ಎಂಬ ವಚನದ ಆಶಯ ಹಿಂಸಾ ಮೂಲ ಪ್ರವೃತ್ತಿ ಯಾರಲ್ಲಿದ್ದರೂ ಅದು ಬಹಿಷ್ಕೃತ ಎಂದು ಅರ್ಥೈಸಬೇಕಲ್ಲವೆ? ಇಲ್ಲಿಯ ಜಾತಿ ಸೂಚಕವಾದ ಅರ್ಥಛಾಯೆಯಾದರೂ ಕಾಣುತ್ತದೆಯೇ?. ವಚನಗಳನ್ನು ಅರ್ಥೈಸುವಾಗ ಅಂದಿನ ಸಂದರ್ಭ, ಸನ್ನಿವೇಶಗಳನ್ನು ಗಮನಕ್ಕೆ ತಂದುಕೊಳ್ಳಬೇಕು. ಇನ್ನು "ಅಪ್ಪನು ಮಾದಾರ ಚೆನ್ನಯ್ಯ, ಬೊಪ್ಪನು-ನಮ್ಮ ಡೋಹರಕಕ್ಕಯ್ಯ. ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ, ಅಣ್ಣನು ಕಿನ್ನರಿ ಬೊಮ್ಮಯ್ಯ"-" ಈ ವಚನದಲ್ಲಿ ಬಸವಣ್ಣನವರು ಸಾಮಾಜಿಕವಾಗಿ ಕೀಳೆನಿಸಿದ ಹಲವು ದಲಿತ ಜಾತಿಯವರನ್ನು ತಮ್ಮವರೆಂದು ಗೌರವದಿಂದ ಭಾವಿಸುತ್ತಿರುವರು" ಎನಿಸುವುದಿಲ್ಲವೆ?" ಚೆನ್ನಯ್ಯನ ಮನೆಯ ದಾಸನ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು-ಇಬ್ಬರೂ ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗನಾನು - ಕೂಡಲ ಸಂಗಮದೇವ ಸಾಕ್ಷಿಯಾಗಿ " ಎಂಬುದಾಗಿ ಹೇಳಿಕೊಂಡಿರುವ ಬಸವಣ್ಣನವರು ಗುಲಾಮರ ಮಕ್ಕಳಿಗೆ ಅವರು ತೋರಿದ ಗೌರವವನ್ನು ವಾತ್ಸಲ್ಯವನ್ನು ಪರಿಭಾವಿಸಿದರೆ" ಅವರ ಮಾನವೀಯತೆಯ ಆಳ ವಿಸ್ತಾರಗಳ ಪರಿಚಿತವಾಗದಿರುತ್ತದೆಯೆ? "ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತಯ್ಯ ಚೆನ್ನಯ್ಯನಾದರಾನು ಬದುಕೆನೆ? ಮುತ್ತಾತ್ತ ಶ್ವಪಚನಯ್ಯ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನರಿಯೆನೆ ಅಯ್ಯಾ? ಕಷ್ಟ ಜಾತಿ ಜನ್ಮದಲ್ಲಿ ಜನಿಸಿದೆ ಎನಗಿದು ವಿಧಿಯೇ ಕೂಡಲ ಸಂಗಮದೇವಾ?" "ಎನ್ನುವಲ್ಲಿ" ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ ಶ್ವಪಚಯ್ಯ ಮುಂತಾದ ದಲಿತವರ್ಗದ ಶಿವಶರಣರನ್ನು ಬಸವಣ್ಣನವರು ವಿಶೇಷ ಭಕ್ತಿಭಾವದಿಂದ ಅವರು ತಮ್ಮ ಗೋತ್ರಪುರುಷರೆಂಬಂತೆ ಶ್ರದ್ಧೆಯಿಂದ, ಬಂಧು ಬಾಂಧವರೆಂಬಂತೆ ಆತ್ಮೀಯತೆಯಿಂದ ನೆನೆಯುತ್ತಿರುವುದು" ಬಸವಣ್ಣನವರು ದಲಿತ ವಿರೋಧಿಯಾಗಿದ್ದರು ಎನಿಸುತ್ತದೆಯೆ?

" ಬಸವಣ್ಣನವರ ಸರ್ವಸಮಾನತೆಯ ಸರ್ವಶ್ರೇಷ್ಠತೆಯ ಸರ್ವೋದ್ಧಾರದ ನವ ಸಮಾಜದ ಕಲ್ಪನೆಗೆ ಚನ್ನಯ್ಯ ಮುಂತಾದ ಪೂರ್ವಶರಣರ ಬೋಧನೆ ಸಂಪೂರ್ಣವಾಗಿ ಹೊಂದಿಕೊಂಡಿದ್ದಲ್ಲದೆ ಅದು ಬಸವಣ್ಣನವರಿಗೆ ಪ್ರೇರಣೆಯನ್ನು ಕೊಟ್ಟಿರಲೂ ಸಾಧ್ಯ. ಅಂತು ಚನ್ನಯ್ಯ ಮುಂತಾದವರು ಬಸವಣ್ಣನವರಿಗೆ ಆದ್ಯರೂ, ಆಚಾರ್ಯರೂ ಆದರು. ಆದುದರಿಂದಲೇ ಬಸವಣ್ಣನವರು ತಮ್ಮ (ಪೂರ್ವಾಶ್ರಮದ್ದೇ ಆದರೂ) ಜಾತಿ ಬ್ರಾಹ್ಮಣ್ಯವನ್ನು ಮತ್ತೆ ನಿರಾಕರಿಸಿಕೊಳ್ಳುತ್ತಿರುವರು"

"ಒಂದು ಆದರ್ಶ ಸಮಾಜದ ಪ್ರತಿಯೊಬ್ಬರೂ ಆಕಸ್ಮಿಕವಾದ ತಂತಮ್ಮ ಜಾತಿಯನ್ನು ನಿರಾಕರಿಸಿಕೊಳ್ಳುವುದು ಧಾರ್ಮಿಕತೆಗೆ ಪ್ರಪ್ರಥಮ ಅರ್ಹತೆಯೆಂಬುದನ್ನು ಅವರು ತೋರಿಸಿ ಕೊಟ್ಟಿರುವರು. ಮೇಲ್ಜಾತಿಯವರು ತಮ್ಮ ಜಾತಿ ನಿರಾಕರಣದಿಂದ ಉಚ್ಚಾನು ಸಂಧಾನವನ್ನೂ, ಕೆಳಜಾತಿಯವರು ತಮ್ಮ ಜಾತಿ ನಿರಾಕರಣದಿಂದ ನೈಚ್ಯಾನು ಸಂಧಾನವನ್ನು ಕಳೆದುಕೊಂಡು-ಉಂಟಾದ ಮುಕ್ತ ಮನಸ್ಸಿನ ಅಡಿಪಾಯದ ಮೇಲೆ ಮಹಾ ಮಾನಸದ ಮಹಾ ಮಾನವ ಸಮಾಜವನ್ನು ಕಟ್ಟುವ ಆಲೋಚನೆ ಅವರದು.'

" ಇಂಥ ಉದಾರ ತಿಳಿವಳಿಕೆ ತಾವು ಬ್ರಾಹ್ಮಣರಾಗಿ ಹುಟ್ಟಿದ್ದರಿಂದ ತಮಗೆ ಲಭ್ಯವಾಗಿದೆಯೆಂದು ಜನರಾಡಿಕೊಳ್ಳುವ ಅವಿವೇಕದ ಮೆಚ್ಚುಗೆಯ ಮಾತುಗಳನ್ನು ಬಸವಣ್ಣನವರು ಅಲ್ಲಗಳೆಯುತ್ತಿರುವರು. ಎಲ್ಲಿ ಹುಟ್ಟಬೇಕು ಎಲ್ಲಿ ಸಾಯಬೇಕು ಎಂಬುದು ದೈವೇಚ್ಛೆ, ನಾನೊಂದು ಪಕ್ಷ ದಲಿತ ಜಾತಿಯಲ್ಲೇ ಹುಟ್ಟಿದ್ದರೆ. ನಾನು ಸದ್ಗುಣಶಾಲಿಯಾಗಿರುತ್ತಿರಲಿಲ್ಲವೆ? ಈ ಭಕ್ತಿ ನನಗೆ ಸಾಧ್ಯವಾಗುತ್ತಿರಲಿಲ್ಲವೆ? ಆ ದಲಿತ ವರ್ಗದ ಕಕ್ಕಯ್ಯನಂಥವರು ಚನ್ನಯ್ಯನಂಥವರು ಅದು ಸಾಧ್ಯವೆಂಬುದಕ್ಕೆ ಸಾಕ್ಷ್ಯ ಒದಗಿಸಿಲ್ಲವೆ? ಸಾಮವೇದಿಯಂಥ ವೈದಿಕ ಮಹಾವಿಪ್ರನಿಗೆ ಶ್ವಪಚಯ್ಯನೆಂಬ ಚಮ್ಮಾರ ಶಿವಭಕ್ತ ಉಪದೇಶ ಮಾಡಲಿಲ್ಲವೆ? ಆದ್ದರಿಂದ ಉತ್ತಮ ಜಾತಿಯಲ್ಲಿ ಹುಟ್ಟಿದವರೇ ಉತ್ತಮವಾದುದನ್ನು ಸಾಧಿಸಬಲ್ಲರೆಂಬ ಮೂಢನಂಬಿಕೆ ನನಗಿಲ್ಲ. ಪ್ರತಿಯಾಗಿ ಇತರ ಜಾತಿಯವರನ್ನು ಕೀಳಾಗಿ ಕಾಣುವ ದ್ವಿಜನ್ಮ ಜಾತಿಯು ಉತ್ತಮ ಜಾತಿಯೆಂದು ನಾನು ಭಾವಿಸುವುದೂ ಇಲ್ಲ. ಅಂಥ ಜಾತಿಯಲ್ಲಿ ನಾನು ಹುಟ್ಟಿದ್ದಕ್ಕಾಗಿ ನನ್ನ ದುರ್ವಿಧಿಯನ್ನು ದೂಷಿಸಿಕೊಳ್ಳುತ್ತಿದ್ದೇನೆ. ನನ್ನ ತಂದೆಯೇ ಅಲ್ಲ, ತಾತನೂ, ತನಗೆ ಉಪದೇಶಿಸಿದ ಸದ್ಗುರುವೂ ಶ್ವಪಚರಾಗಿದ್ದಿದ್ದರೆ ನಾನು ಭಾಗ್ಯಶಾಲಿಯೆಂದೇ ಭಾವಿಸುತ್ತಿದ್ದೆ'-ಎಂದಿರುವರು ಬಸವಣ್ಣನವರು.

ಇಂಥ ಬಸವಣ್ಣನವರನ್ನೂ ದಲಿತ ವಿರೋಧಿ ಎನ್ನಬಹುದೆ? ಈ ಸಂಪಾದಕೀಯ ಬರೆಯುವಲ್ಲಿ ಡಾ|| ಎಲ್. ಬಸವರಾಜು ಅವರಿಂದ ವ್ಯಾಖ್ಯಾನಿತ ಹಾಗೂ ಸಂಪಾದಿತವಾಗಿರುವ" ಬಸವಣ್ಣನವರ ಷಟ್ಸ್ಥಲದ ವಚನಗಳು ಸಹಚಿಂತನದಿಂದ ವಿಶೇಷ ಉಪಕೃತವಾಗಿದೆ.

● **ಚಿಂತನ :**

## ಅರ್ಪಣ ಭಾವ–ಹಾಗೂ–ಆತ್ಮಯಜ್ಞ.

–ತದ್ದಲಸೆ ವಿಘ್ನೇಶ್ವರಶರ್ಮಾ, ಹುಣ್ಸೇಕೊಪ್ಪ. ತಾ|| ಶಿರಸಿ. (ಉ.ಕ.)

ಕಾಯಕವೇ ಕೈಲಾಸವೆನ್ನುತ್ತೇವೆ. ಕರ್ಮವೇ ದೇವರೆನ್ನುತ್ತೇವೆ. ಆದರೆ ಹೀಗೆ ಹೇಳುವುದರಿಂದೇನೂ ಅವು ಹಾಗೆ ಆಗುವುದಿಲ್ಲ. ನಮ್ಮ ಭಾವನೆಯಲ್ಲೆ ಅಂಥ ಅರ್ಪಣ ಭಾವನೆ ಬೆಳೆದು ಬರಬೇಕು. ಕಾಯಕವನ್ನೇ ಕೈಲಾಸದಂತೆ ಮಾಡಬೇಕು. ನಾವು ಮಾಡುವ ಎಲ್ಲ ಕರ್ಮಗಳಲ್ಲೂ ಶ್ರೇಷ್ಠ–ವಿಶಿಷ್ಟ ಯೋಗ ಕೂಡಿಕೊಂಡರೆ ಅಂಥ ಕರ್ಮವೂ ಸಮರ್ಪಕವಾಗುವುದರ ಜೊತೆಗೆ ಸಫಲವಾಗುವದೂ ನಿಶ್ಚಿತ. ಹಾಗಾಗಿ ಯಾವುದೇ ಕಾರ್ಯ ಮಾಡಬೇಕಾದಾಗಲೂ ಅಲ್ಲಿ ಅರ್ಪಣ ಭಾವವಿರಲೇ ಬೇಕಾದುದು ಅಗತ್ಯ. ಇದರಿಂದ ಕಾರ್ಯ ನಿರ್ವಹಣೆಯಲ್ಲೆ ತನ್ಮಯತೆ ಬರುತ್ತದೆ. ಹಾಗೂ ಅದರ ಶ್ರಮ ಮನಸ್ಸಿಗೆ ಅಂಟಿಕೊಳ್ಳುವುದೇ ಇಲ್ಲ. ಅದರ ಮುಕ್ತಾಯದಲ್ಲಿ ಮನಸ್ಸಿಗೊಂದು ಅವ್ಯಕ್ತ ಸಂತೋಷವು ಆಗುತ್ತದೆ.

ಭಗವದ್ಗೀತೆಯೂ ಇದನ್ನು ಎತ್ತಿ ಹೇಳುತ್ತದೆ. ಈಶ್ವರಾರ್ಪಣಭಾವದಿಂದ ಕಾರ್ಯ ನಿರ್ವಹಿಸಬೇಕೆಂಬುದು ಅವರ ಅಭಿಪ್ರಾಯ. 'ಈಶಾವಾಸ್ಯಮಿದಂ ಸರ್ವಂ' ಎಲ್ಲವೂ ಅವನ! ಅಧೀನಕ್ಕೆ ಸೇರಿದ್ದು ಎಂದು ಉಪನಿಷತ್ತು ಸಾರುತ್ತದೆ. ಒಂದು ರೀತಿಯಿಂದ ಮನುಕುಲವೆಲ್ಲ ಈ ಸೃಷ್ಟಿಯ ಪ್ರಾಕೃತಿಕ ಸಂಸ್ಥೆಯಲ್ಲಿ ಋಣ-ಹಾಗೂ ಕರ್ಮ ಸಂಬಂಧದ ಮೂಲಕ ಸದಸ್ಯತ್ವ ಪಡೆದರು ಎಂದರೂ ತಪ್ಪಾಗದು. ಪ್ರಕೃತಿಯ ಕೊಡುಗೆಗಳಾದ ಮಣ್ಣು-ಗಾಳಿ, ನೀರು-ಬೆಳಕುಗಳನ್ನು ಧಾರಾಳವಾಗಿ ಬಳಸಿ ನಮ್ಮ ಸುಖ-ಸ್ವಾಸ್ಥ್ಯಕ್ಕಾಗಿ ಅವುಗಳ ಋಣವನ್ನೂ ಬಳಸಿಕೊಂಡವರು. ಈ ಬಳಕೆಯ ಸಾಲವನ್ನು ಪ್ರಕೃತಿ ಸಂಸ್ಥೆಗೆ ಬಡ್ಡೀಸಹಿತ ಹಿಂದಿರುಗಿಸ ಬೇಕಾದುದು ಕರ್ತವ್ಯ. ಯಜ್ಞ-ದಾನ-ತಪಸ್ಸುಗಳ ಮೂಲಕ ಅವನ್ನು ಕಾಲ ಕಾಲಕ್ಕೆ ತೀರಿಸಿ ಮತ್ತೆ ಅವು ಚೈತನ್ಯ ಶೀಲವಾಗುವಂತೆ ಮಾಡುವುದರಿಂದ ಈ ಪ್ರಪಂಚದಲ್ಲಿ ಬದುಕಲು ಅರ್ಹತೆ ಗಳಿಸುತ್ತಾನೆ. ಹುಟ್ಟುವಾಗಲೇ ತಂದ ಸಾಲವನ್ನು ಆಗಾಗ ಸಂದಾಯ ಮಾಡದಿದ್ದರೆ ಹೇಗೆ? ಪ್ರಕೃತಿ ನಮ್ಮನ್ನು ಕ್ಷಮಿಸುತ್ತದೆಯೇ? ಭೂಮಿಯಲ್ಲಿ ನಿರಂತರವೂ ಬೆಳೆ ಬೆಳೆಯುವುದರಿಂದ ಅದು ಕ್ರಮೇಣ ಸತ್ವಹೀನವಾಗುತ್ತದೆ. ಸವಕಲಾಗುತ್ತದೆ. ಹಾಗಾಗಿ ಹೆಚ್ಚು ಹೆಚ್ಚು ಗೊಬ್ಬರ ನೀಡಿ ಫಲವತ್ತತೆ ಹೆಚ್ಚಿಸಬೇಕು. ಸಕಾಲಕ್ಕೆ ಉಳುಮೆ ಮಾಡಿ ಸಾರ ಸತ್ವ ನೀಡಿ ಕೃಷಿ ಮಾಡುವುದೇ ಶ್ರಮ ಯಜ್ಞವೆನ್ನಿಸುತ್ತದೆ. ಇಲ್ಲಿ ನಮ್ಮ ಪೋಷಣೆಯ ಜೊತೆಗೆ ಪ್ರಕೃತಿಯ ಪೋಷಣೆ-ಪೂಜೆಯೂ ಆಗುತ್ತದ.

ಹಾಗೆಯೇ ಸಮಾಜದ ಋಣವು ನಮ್ಮ ಮೇಲೆ ಹೆಚ್ಚುತ್ತಲೇ ಇರುವುದನ್ನು ಮರೆಯ ಕೂಡದು. ಅದರ ಸಹಾನುಭೂತಿ ಸಹಕಾರ–ಸಹಾಯದಿಂದಲೇ ನಮ್ಮ

ಬದುಕಿಗೆ ಹೆಚ್ಚಿನ ಪ್ರಭಾವ ಪ್ರತಿಷ್ಠೆ ಬರುತ್ತದೆ. ಸಮಾಜದ ಅನೇಕ ವ್ಯಕ್ತಿ-ಶಕ್ತಿಗಳು ನಮ್ಮನ್ನು ತಿದ್ದುತ್ತವೆ. ಧರ್ಮ ಭೀರುತ್ವ-ನ್ಯಾಯ ಭೀರುತ್ವ ಬೆಳೆಸುತ್ತದೆ. ನಾವು ಒಳ್ಳೆಯ ದಾರಿಯಲ್ಲಿ ಸಾಗುವಂತೆ ಮಾಡುವುದಕ್ಕೆ ಪ್ರೇರಕವಾಗುತ್ತದೆ. ಈ ಕಾರಣ-ದಿಂದ ಸಾಮಾಜಿಕ ಋಣ ನೀಗಿಸಲು ದಾನ ಯಜ್ಞದತ್ತ ಹೆಚ್ಚು ಗಮನ ಕೊಡಲು ಮುಂದಾಗಬೇಕು. ಸಂಗ್ರಹಿಸಿದ ಸಂಪತ್ತು ದಾನದ ಮೂಲಕ ಅರ್ಪಣ ಭಾವದೊಂದಿಗೆ ಸಮಾಜಕ್ಕೆ ಸೇರಿದರೆ ಅದರ ಶಕ್ತಿ ಹೆಚ್ಚಿಸಲು ಸಹಾಯವಾಗುತ್ತದೆ. ಹಾಗೂ ಸಂಪತ್ತಿನ ಕೇಂದ್ರಿಯಕರಣವೂ ತಪ್ಪುತ್ತದೆ.

ಇನ್ನು ನಮ್ಮ ವಾಕ್-ಕಾಯ-ಕರ್ಮಗಳನ್ನು ಸಂಸ್ಕರಿಸಲು ಹಾಗೂ ಆತ್ಮ-ಶ್ರೀಯನ್ನು ಹೆಚ್ಚಿಸಿಕೊಳ್ಳಲು ತಪೋ ಯಜ್ಞವನ್ನು ಎಂದಿಗೂ ಬಿಡುವಂತಿಲ್ಲ. ಮನಸ್ಸಿನ ವಿಕಾರಗಳನ್ನು ಅಳಿಸಿ ಹಾಕದಿದ್ದರೆ ಸುಪ್ರಸನ್ನತೆ ಬರುವುದಿಲ್ಲ. ಹಾಗೆಂದು ಈ ವಿಕಾರ ಅಳಿಸುವುದೂ ಸುಲಭವೂ ಅಲ್ಲ. ಅದು ನಮ್ಮಲ್ಲಿಯೇ ಇದ್ದ ವೈರಿಯಾಗಿದೆ. ಇದನ್ನು ಕ್ರಮ-ಕ್ರಮವಾಗಿ ಗೆಲ್ಲುವುದು ಸಾಧ್ಯ. ತಪೋಯಜ್ಞ ಇದನ್ನು ಮೈಗೂಡಿಸಿ ಕೊಡುವ ಸಾಧನವೆನ್ನಿಸಿದೆ.

ನಮ್ಮ ಸಕಲ ಕರ್ಮಗಳಲ್ಲಿ ಸೊಗಸು-ಸೌಂದರ್ಯಗಳು ಹೆಚ್ಚಬೇಕಾದರೆ ಕರ್ಮ ನಿಷ್ಠೆ-ಪವಿತ್ರ ಭಾವನೆ ಅವಶ್ಯ. ಇದನ್ನು ಸಾತ್ವಿಕ ಯಜ್ಞವೆಂದು ಗಾಂಧೀಜಿಯವರು ಕರೆದರೆ ಇಂಥ ಕಾರ್ಯಗಳು 'ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋತ-ವಾರಾಧನಂ' ಈಶ್ವರಾರಾಧನೆಯೆಂಬುದಾಗಿ ಆಚಾರ್ಯರು ಆದೇಶಿಸಿದ್ದಾರೆ. ಗೀತೆಯಲ್ಲಿ ಹೇಳಿದ 'ಮಾಮನುಸ್ಮರ ಯುದ್ಧ್ಯಚ' ಅಂದರೆ ನನ್ನನ್ನು ಸ್ಮರಿಸಿ ನಿನ್ನ ಕರ್ತವ್ಯ ನಿರ್ವಹಿಸು ಎಂಬುದೇ ಇದರ ಅಭಿಪ್ರಾಯ. ನಮ್ಮ ಎಲ್ಲ ಕರ್ಮಗಳಲ್ಲು ಈಶ್ವರಾರ್ಪಣ ಭಾವವಿದ್ದರೆ ಅದೇ ಜೀವನ ಯೋಗವಾದೀತು. ಬಾಹ್ಯ ಯಜ್ಞದಿಂದ ಮನಃಶುದ್ಧಿ ಪಡೆದು ಅತ್ಮ ಯಜ್ಞಕ್ಕೆ ಪ್ರೇರಣೆ ಪಡೆಯುವುದೇ ಇಲ್ಲಿರುವ ಅಂತದೃಷ್ಟಿ. "ಸ್ವಸ್ತಿ ಪಂಥಾಮನುಚರೇಮ" ಆಗಬೇಕಾದರೆ ಮಾನಸಿಕ ವಿಕಾರಗಳು ಪ್ರವೃತ್ತಿಗಳು ಅಳಿಯುವಂತಾಗಬೇಕು.

ಜೀವನವು ಪಾವನವಾಗಬೇಕಾದರೆ ಅರ್ಪಣ ಭಾವ, ಅತ್ಮ ಯಜ್ಞ ಇವುಗಳಲ್ಲಿ ಅನ್ಯೋನ್ಯ ಸಂಬಂಧ ಹೊಂದಿಕೊಳ್ಳಬೇಕು. ಇವು ಒಂದೇ ನಾಣ್ಯದ ಎರಡು ಮುಖಗಳು ಇದ್ದ ಹಾಗೆ. ಭಾವನೆ ಶುದ್ಧವಾಗಿ ಕರ್ಮ ಮಾಡಿದರೇನೇ ಅದರ ಸಂತೃಪ್ತಿಯ ಫಲ ಮನಸ್ಸಿಗೆ, ಹಾಗೆ ಸುಪ್ರಸನ್ನ ಮನಸ್ಸೂ ಆತ್ಮಶುದ್ಧಿಗೆ ಸಹಾಯಕ. ಹೀಗೆ ನಮ್ಮನ್ನು ನಾವು ಅರಿತು-ಗುರುತಿಸಿಕೊಳ್ಳುವಲ್ಲಿ ಮುನ್ನಡೆಸುವಲ್ಲಿ ಇಂಥ ಭಾವ-ಯೋಗಗಳು ತೀರ ಅವಶ್ಯಕ.



## ಕಣ್ಮರೆಯಾದ ಮಹಾಸೇನಾನಿ
## ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರು

—ಕೆ. ಎಂ. ರುದ್ರಪ್ಪನವರು, ಸ್ವಾತಂತ್ರ್ಯ ಹೋರಾಟಗಾರರು ಮತ್ತು ಮಾಜಿ ಶಾಸಕರು.

ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರು ಸ್ವಾತಂತ್ರ ಭಾರತದ ಪ್ರಥಮ ಮಹಾ ದಂಡನಾಯಕರಾಗಿದ್ದುದಲ್ಲದೆ ಅಂತರರಾಷ್ಟ್ರೀಯ ಖ್ಯಾತಿಯ ಮಹಾ ಸೇನಾನಿಯೂ ಆಗಿದ್ದರು, ಇವರದು ವರ್ಣರಂಜಿತ ವ್ಯಕ್ತಿತ್ವ.

ಉತ್ತರ ಕೊಡಗಿನ ಶನಿವಾರ ಸಂತೆಯಲ್ಲಿ ಕೋಡಂದೇರು ಮನೆತನದ ಮಾದಪ್ಪ ಮತ್ತು ಕಾವೇರಮ್ಮನವರ ಸುಪುತ್ರರಾಗಿ ಜನಿಸಿದ ಇವರಿಗೆ ನಿಧನರಾದಾಗ 94 ವರ್ಷ ವಯಸ್ಸಾಗಿತ್ತು. ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಪಾಸು ಮಾಡಿ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ಪರೀಕ್ಷೆಗೆ ಓದುತ್ತಿದ್ದಾಗಲೇ ಅಂದಿನ ವೈಸ್‌ರಾಯ್ ಆಗಿದ್ದ ಲಾರ್ಡ್ ಚೆಲ್ಮ್ಸ್‌ಫರ್ಡನು ಇವರನ್ನು ಕಿಂಗ್ಸ್ ಕಮಿಷನ್ನಿನ ಕೆಡೆಟ್ ಆಗಿ ಆಯ್ಕೆ ಮಾಡಿದನು. ಇದು ನಡೆದಿದ್ದು 1919 ರಲ್ಲಿ. ಅನಂತರ ಕಾರ್ಯಪ್ಪನವರು ಇಂದೂರಿನ ಡಾಲಿ ಸೈನ್ಯ ಶಿಕ್ಷಣ ಸ್ಕೂಲಿನಲ್ಲಿ ತರಬೇತು ಪಡೆದು ಸೆಕೆಂಡ್‌ಲೆಫ್ಟಿನೆಂಟಾಗಿ ನೇಮಕ ಹೊಂದಿ ಅನೇಕ ರೆಜಿಮೆಂಟುಗಳಲ್ಲಿ ದಕ್ಷತೆಯಿಂದ ಕೆಲಸ ಮಾಡಿ, ಅಡೆತಡೆಯಿಲ್ಲದೆ ಮೇಲಕ್ಕೇರುತ್ತಲೇ ಬಂದರು. 1949 ರಲ್ಲಿ ಭಾರತದ ಮಹಾದಂಡನಾಯಕರಾಗಿ ಎಫ್.ಆರ್.ಎ. ಬುಚರ್ ಎಂಬುವವರಿಂದ ಅಧಿಕಾರ ವಹಿಸಿಕೊಂಡರು. ಆ ಕಾಲದಲ್ಲಿ ಭೂ-ಸೈನ್ಯ, ನೌಕಾಬಲ ಮತ್ತು ವಾಯುಪಡೆ ಇವು ಮೂರಕ್ಕೂ ಒಬ್ಬರೇ ಕಮ್ಯಾಂಡರ್ ಇನ್ ಚೀಫ್ ಆಗಿದ್ದರು. ಈ ಪದವಿಯನ್ನು ಜನರಲ್ ಕಾರ್ಯಪ್ಪನವರು ಚಾಕಚಕ್ಯತೆಯಿಂದಲೂ, ದಕ್ಷತೆಯಿಂದಲೂ ನಿರ್ವಹಿಸಿ 1953 ರಲ್ಲಿ ನಿವೃತ್ತರಾದರು. ಈಚೆಗೆ ಭೂಸೈನ್ಯ, ನೌಕಾಬಲ ಮತ್ತು ವಾಯುಪಡೆಗಳನ್ನು ಪ್ರತ್ಯೇಕಗೊಳಿಸಲಾಗಿದೆ. ಮೂರಕ್ಕೂ ಈಗ ಪ್ರತ್ಯೇಕ ಮುಖ್ಯಸ್ಥರಿದ್ದಾರೆ.

ಜನರಲ್ ಕಾರ್ಯಪ್ಪ ಅವರನ್ನು 1953 ರಲ್ಲಿ ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡ್ ರಾಷ್ಟ್ರಗಳ ಹೈಕಮಿಷನರ್ ಆಗಿ ಪ್ರಧಾನಿ ನೆಹರು ಶಿಫಾರಸ್ಸಿನ ಮೇಲೆ ರಾಷ್ಟ್ರಪತಿಗಳಾಗಿದ್ದ ಡಾ॥ ರಾಜೇಂದ್ರಪ್ರಸಾದ್ ಅವರು ನೇಮಕ ಮಾಡಿದರು. ಎತ್ತರದ ನಿಲುವಿನ, ಆಕರ್ಷಕ ವ್ಯಕ್ತಿತ್ವದ ಶಿಸ್ತಿನ ಯೋಧರಾಗಿದ್ದ ಜನರಲ್ ಕಾರ್ಯಪ್ಪನವರು ಬಹು ಬೇಗ ಆಸ್ಟ್ರೇಲಿಯದಲ್ಲಿ ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾದರು.

ಆಸ್ಟ್ರೇಲಿಯದ ನಾಗರೀಕರು ಜನರಲ್ ಕಾರ್ಯಪ್ಪನವರನ್ನು ಚುನಾವಣೆಗೆ ನಿಲ್ಲಿಸಿ ಆ ರಾಷ್ಟ್ರದ ಅಧ್ಯಕ್ಷರನ್ನಾಗಿ ಮಾಡುವರೆಂಬ ಸುದ್ದಿ ಪತ್ರಿಕೆಗಳಲ್ಲೆಲ್ಲಾ

ಪ್ರಕಟವಾಯಿತು. ಆಗ ಕೃಷ್ಣಮೆನೆನ್ ಮುಂತಾದವರು ಪ್ರಧಾನಿ ನೆಹರು ಅವರ ಬಳಿ ಜನರಲ್ ಕಾರ್ಯಪ್ಪನವರ ಬಗ್ಗೆ ಚಾಡಿ ಹೇಳಲು ಪ್ರಾರಂಭಿಸಿದರು. 1956 ರಲ್ಲಿ ಪಂಡಿತ್ ನೆಹರು ಅವರು ಕಾರ್ಯಪ್ಪನವರನ್ನು ಆಸ್ಟ್ರೇಲಿಯದಿಂದ ವಾಪಸ್ಸು ಕರೆಸಿಕೊಂಡರು

1956 ರ ನವೆಂಬರ್ ಒಂದರಂದು ಭಾಷವಾರು ಪ್ರಾಂತದನ್ವಯ ‹‹ವಿಶಾಲ ಮೈಸೂರು' ರಚನೆಯಾಯಿತು. ಶ್ರೀ ಎಸ್. ನಿಜಲಿಂಗಪ್ಪ ಅವರು ಮುಖ್ಯಮಂತ್ರಿಗಳಾದರು. ಕೊಡಗು ವಿಲೀನ ಆಗಿ ಅಲ್ಲಿನ ಮುಖ್ಯಮಂತ್ರಿಗಳಾಗಿದ್ದ ಸಿ. ಎಂ. ಪೂಣಚ್ಚ ಅವರು ಗೃಹಮಂತ್ರಿಗಳಾದರು. ಜನರಲ್ ಕಾರ್ಯಪ್ಪನವರ ಅಂತಸ್ತು ಗೌರವಕ್ಕೆ ತಕ್ಕಂತೆ ಸರ್ಕಾರದಿಂದ ಕೊಡಬೇಕಾದ ಎಲ್ಲಾ ಸೌಲಭ್ಯಗಳನ್ನು ಜನರಲ್ ಕಾರ್ಯಪ್ಪನವರಿಗೆ ನಿಜಲಿಂಗಪ್ಪ ಸರ್ಕಾರದವರು ನೀಡಿ ಅವರು ಮಡಕೇರಿ ಪಕ್ಕದ ‹‹ರೋಷನಾರ' ಬಂಗಲೆಯಲ್ಲಿ ವಾಸಿಸುವಂತೆ ಏರ್ಪಡಿಸಿದರು. 32 ಎಕರೆ ಪ್ರದೇಶದಲ್ಲಿರುವ 'ರೋಷನಾರ' ಬಂಗಲೆಯನ್ನು ಕಾರ್ಯಪ್ಪನವರು 18 ಸಾವಿರ ರೂಪಾಯಿಗಳಿಗೆ ಹಿಂದೆಯೇ ಕೊಂಡಿದ್ದರು. ನಿಸರ್ಗ ಪ್ರೇಮಿಯಾದ ಕಾರ್ಯಪ್ಪನವರು ಆ ಕಾಡನ್ನು ಕಾಫಿ ತೋಟವನ್ನಾಗಿ ಪರಿವರ್ತಿಸಲು ಒಪ್ಪಲಿಲ್ಲ. ಅಲ್ಲಿ ಉತ್ತಮ ಜಾತಿಯ ಮರಗಳನ್ನು ಬೆಳೆಸಿ ಅದನ್ನು ಒಂದು ರಮ್ಯ ವನವನ್ನಾಗಿ ಮಾಡಿದ್ದಾರೆ. ಈಗ ಅದು ಸುಂದರ ತಾಣವಾಗಿದೆ.

ಜನರಲ್ ಕಾರ್ಯಪ್ಪನವರಿಗೆ ಉಕ್ಕಿನ ಮನುಷ್ಯರೆಂದು ಹೆಸರಾಗಿದ್ದ ಸರ್ದಾರ್ ಪಟೇಲರ ಬಗ್ಗೆ ವಿಶೇಷ ಗೌರವವಿದ್ದಿತು. ಇವರು ‹‹ ರೋಷನಾರ್'ದ ಬಂಗಲೆಯಲ್ಲಿ ಸರ್ದಾರ್ ಪಟೇಲರ ಭಾವಚಿತ್ರವನ್ನು ಮಾತ್ರ ಪ್ರಮುಖ ಸ್ಥಳದಲ್ಲಿ ಹಾಕಿದ್ದರು. ಕಾರ್ಯಪ್ಪನವರು 1971 ರಲ್ಲಿ ಬೊಂಬಾಯಿ ಉತ್ತರ ಭಾಗದ ಲೋಕಸಭಾ ಕ್ಷೇತ್ರದಿಂದ ಸಿ. ರಾಜಗೋಪಾಲಚಾರಿಯವರ ಪ್ರಭಾವಕ್ಕೊಳಗಾಗಿ ಚುನಾವಣೆಗೆ ನಿಂತಿದ್ದರು. ಶಿವಸೇನೆಯ ಬೆಂಬಲವೂ ಇವರಿಗಿದ್ದಿತು. ಗೆಲ್ಲುವ ಲಕ್ಷಣಗಳು ಇದ್ದವು. ಆದರೆ ಪ್ರಧಾನಿ ಇಂದಿರಾಗಾಂಧಿಯವರು ಎಲ್ಲಾ ತಂತ್ರಗಳನ್ನು ಉಪಯೋಗಿಸಿ ಕಾರ್ಯಪ್ಪನವರು ಸೋಲುವಂತೆ ಮಾಡಿದ್ದರು. ಅನಂತರ ಕಾರ್ಯಪ್ಪನವರು ಚುನಾವಣೆಯ ತಂಟೆಗೆ ಹೋಗಲಿಲ್ಲ. ಜನರಲ್ ಕಾರ್ಯಪ್ಪನವರದ್ದು ಸರ್ ಎಂ. ವಿಶ್ವೇಶ್ವರಯ್ಯನವರಂತೆ ಶಿಸ್ತಿನ ಜೀವನ. ಇವರ ಭೇಟಿಗೆ ‹‹ರೋಷನಾರ್‹ ಕ್ಕೆ ಹೋದವರೆಲ್ಲಾ ಅಲ್ಲಿಟ್ಟಿದ್ದ ದೊಡ್ಡ ಪುಸ್ತಕದಲ್ಲಿ ಹೆಸರು ವಿಳಾಸ, ಭೇಟಿಯಾದ ವೇಳೆ ತಾರೀಖು ಎಲ್ಲವನ್ನು ಬರೆದು ರುಜು ಹಾಕುವುದು ಅನಿವಾರ್ಯವಾಗಿತ್ತು. ಬೇಟಿಯ ವಿವರಗಳನ್ನು ಕಾರ್ಯಪ್ಪನವರು ತಮ್ಮ ಡೈರಿಯಲ್ಲಿ ಬರೆದಿಡುತ್ತಿದ್ದರೆಂದು ತಿಳಿದು ಬಂದಿದೆ. ಇವುಗಳನ್ನು ಪತ್ರಾಗಾರದಲ್ಲಿ ಅಮೂಲ್ಯ ದಾಖಲೆಗಳಾಗಿ ರಕ್ಷಿಸಲ್ಪಡಬೇಕಾಗಿದೆ.



ಜನರಲ್ ಕಾರ್ಯಪ್ಪನವರಿಗೆ ಪ್ರಪಂಚದ ಅನೇಕ ದೇಶಗಳಲ್ಲಿ ಆತ್ಮೀಯ ಸ್ನೇಹಿತರಿದ್ದರು. ಅಮೇರಿಕಾದ ಅಧ್ಯಕ್ಷ ಹ್ಯಾರಿಟ್ರೂಮನ್, ಐಸನ್ ಹೋವರ್, ಪಾಕೀಸ್ಥಾನದ ಅಧ್ಯಕ್ಷ ಫೀಲ್ಡ್ ಮಾರ್ಷಲ್ ಅಯೂಬಖಾನ್, ಇಂಗ್ಲೆಂಡಿನ ಪ್ರಧಾನಿಯಾಗಿದ್ದ ಹೆರಾಲ್ಡ್ ಮ್ಯಾಕೆಮಿಲನ್, ನೇಪಾಳದ ದೊರೆ ತ್ರಿಭುವನ ಮುಂತಾದವರೆಲ್ಲಾ ಇವರ ಸ್ನೇಹಿತರೂ ಅಭಿಮಾನಿಗಳೂ ಆಗಿದ್ದರು.

ಭಾರತದಲ್ಲಿ ಸಿ. ರಾಜಗೋಪಾಲಚಾರಿಯವರು ಕಾರ್ಯಪ್ಪನವರ ಇನ್ನೊಬ್ಬ ಮೆಚ್ಚುಗೆಯ ಮುತ್ಸದ್ಧಿಯಾಗಿದ್ದರು. ಸರ್ದಾರ್ ಪಟೇಲರು ಕಾರ್ಯಪ್ಪನವರ ವಿಶೇಷ ಗೌರವಕ್ಕೆ ಪಾತ್ರರಾಗಿದ್ದರೆಂಬುದನ್ನು ಹಿಂದೆಯೇ ಹೇಳಿದೆ, ಇವರಲ್ಲದೆ ಕಾಮರಾಜನಾಡಾರ್, ಎಸ್. ನಿಜಲಿಂಗಪ್ಪ, ಪ್ರೊ: ರಂಗ, ಲಾಲ್ ಬಹದ್ದೂರ್ ಶಾಸ್ತ್ರಿ, ಎಸ್.ಕೆ ಪಾಟೀಲ್, ಸಿ.ಡಿ. ದೇಶಮುಖ್, ಜಸ್ಟೀಸ್ ಚಾಗ್ಲ, ಸರ್ದಾರ್ ಸ್ವರ್ಣಸಿಂಗ್, ಸಿ.ಬಿ. ಗುಪ್ತ, ಜನರಲ್ ಕೆ.ಎಸ್. ತಿಮ್ಮಯ್ಯ, ಸಿ.ಎಂ.ಪೂಣಚ್ಚ ಕೆ. ಹನುಮಂತಯ್ಯ, ಡಿ.ಸಿ. ಪಾವಟೆ ಮುಂತಾದವರೆಲ್ಲಾ ಕಾರ್ಯಪ್ಪನವರ ಅಪ್ತ ಸ್ನೇಹಿತರಾಗಿದ್ದರು,

ಈಗ್ಗೆ ಇಪ್ಪತ್ತು ವರ್ಷಗಳಲ್ಲಿ ರಾಷ್ಟ್ರಮಟ್ಟದಲ್ಲಿ ಕಾರ್ಯಪ್ಪನವರನ್ನು ವೈಭವಯುತ ಸಮಾರಂಭದಲ್ಲಿ ಸನ್ಮಾನಿಸಲಾಯಿತು. ಸ್ವಾಗತ ಸಮಿತಿಗೆ ಮಾಜಿ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪ ಅವರು ಅಧ್ಯಕ್ಷರಾಗಿದ್ದರು. ಅನೇಕ ಗಣ್ಯರು ಸ್ವಾಗತ ಸಮಿತಿಯ ಸದಸ್ಯರಾಗಿದ್ದರು. ವಿಧಾನ ಸಭಾ ಸದಸ್ಯನಾಗಿದ್ದ ನಾನು ಅದರ ಸಂಚಾಲಕ ಸದಸ್ಯನಾಗಿದ್ದೆನು. ಆ ಸಮಯದಲ್ಲಿ ಒಂದು ' ಸಾವೆನೀರ್ ' ಪ್ರಕಟಿಸಲಾಗಿತ್ತು ಅದರಲ್ಲಿ ಖ್ಯಾತ ಸಾಹಿತಿಗಳು, ಹೆಸರಾಂತ ಲೇಖಕರು, ಕಾರ್ಯಪ್ಪನವರ ವಿವಿಧ ಪ್ರತಿಭೆಗಳ ಬಗ್ಗೆ ಬರೆದು ಅವರ ವರ್ಣಮಯ ವ್ಯಕ್ತಿತ್ವವನ್ನು ಚಿತ್ರಿಸಿರುವುದನ್ನು ಮತ್ತು ಪ್ರಪಂಚದ ಅನೇಕ ರಾಷ್ಟ್ರಗಳಿಂದ ಅವರಿಗೆ ಪ್ರಶಸ್ತಿಗಳು, ಬಹುಮಾನಗಳು ಬಂದಿರುವುದನ್ನು ವರ್ಣಿಸಿರುವುದನ್ನು ನೋಡಬಹುದು. ಅದು ಜೋಪಾನವಾಗಿ ಕಾಯ್ದಿರಿಸಬೇಕಾದ ಗ್ರಂಥವಾಗಿದೆ. ಅಲಾಗಾಯ್ತು ನಾನು ಜನರಲ್ ಕಾರ್ಯಪ್ಪನವರೊಡನೆ ಪತ್ರ ವ್ಯವಹಾರ ನಡೆಸುತ್ತಿದ್ದೆನು. ಇಂದಿರಾಗಾಂಧಿ ಎಸ್. ನಿಜಲಿಂಗಪ್ಪ, ಸಿ. ರಾಜಗೋಪಾಲಚಾರಿಯವರಂತೆ, ಕಾರ್ಯಪ್ಪನವರು ಸಹ ಸಿದ್ಧಹಸ್ತರು, ಇವರು ತಮ್ಮ ಸ್ವಹಸ್ತದಿಂದ ನನಗೆ ಬರೆದಿರುವ ಮೂರು ಕಾಗದಗಳು ನನ್ನ ಬಳಿ ಇವೆ. ಇಂಗ್ಲೀಷಿನಲ್ಲಿರುವ ಆ ಕಾಗದಗಳನ್ನು ಇತರೆ ಗಣ್ಯರಿಂದ ಬಂದ ಅಮೂಲ್ಯ ಕಾಗದಗಳ ಜೊತೆ ಅದನ್ನು ಜೋಪಾನವಾಗಿ ಇಟ್ಟಿದ್ದೇನೆ. ಮುಂದೆ ಅವುಗಳನ್ನೆಲ್ಲಾ ರಾಷ್ಟ್ರೀಯ ಪತ್ರಾಗಾರ ಅಥವಾ ಮ್ಯೂಸಿಯಂಗೆ ಕಳುಹಿಸಿಕೊಡಬೇಕೆಂದಿದ್ದೇನೆ.

ಜನರಲ್ ಕಾರ್ಯಪ್ಪನವರು ಸ್ನೇಹಪರರು, ಸಜ್ಜನಿಕೆಗೆ ಹೆಸರಾದವರು. ತುಂಬಾ ಸುಸಂಸ್ಕೃತರು, ಅವರಲ್ಲಿ ಮುಚ್ಚುಮರೆ ಇರಲಿಲ್ಲ. ಭಾರತ, ಪಾಕಿಸ್ತಾನಗಳ ನಡುವೆ ಸೌಹಾರ್ದತೆಯನ್ನು ಮೂಡಿಸಲು ಅವರು ಅನೇಕ ವೇಳೆ ತಮ್ಮ ಸ್ವಂತ ಖರ್ಚಿನಿಂದ ಪಾಕಿಸ್ಥಾನಕ್ಕೆ ಹೋಗಿ ಅಲ್ಲಿನ ಅಧ್ಯಕ್ಷರೊಡನೆ ಮಾತುಕತೆ ನಡೆಸಿ ಬಂದದ್ದು ಕಾರ್ಯಪ್ಪನವರ ಉಜ್ವಲ ರಾಷ್ಟ್ರಪ್ರೇಮದ ದ್ಯೋತಕವಾಗಿದೆ. ಇಂತಹ ಶ್ರೇಷ್ಠ ಯೋಧ ಹಾಗೂ ಮುತ್ಸದ್ಧಿಗೆ 'ಭಾರತ ರತ್ನ ಪ್ರಶಸ್ತಿ ದೊರಕಲಿಲ್ಲ. ಮಾತ್ರವಲ್ಲ, ಇವರಿಗೆ ಪ್ರಥಮವಾಗಿ ಫೀಲ್ಡ್ ಮಾರ್ಷಲ್ ಹುದ್ದೆಯ ಗೌರವವೂ ದೊರಕಲಿಲ್ಲ. ಫೀಲ್ಡ್ ಮಾರ್ಷಲ್ ಹುದ್ದೆ ಪ್ರಥಮವಾಗಿ ಜನರಲ್ ಮಾಣಿಕ್‌ಷಾ ಅವರಿಗೆ ಲಭಿಸಿತು. 1986ರಲ್ಲಿ ರಾಷ್ಟ್ರಪತಿ ಜೈಲ್‌ಸಿಂಗರು ಕಾರ್ಯಪ್ಪನವರಿಗೆ ಫೀಲ್ಡ್ ಮಾರ್ಷಲ್ ಹುದ್ದೆಯ ಬೆಳ್ಳಿಯ ಅಧಿಕಾರ ದಂಡವನ್ನು ನೀಡಿದರು. ಆ ಗೌರವ ಹೊಂದಿದವರಲ್ಲಿ ಕಾರ್ಯಪ್ಪನವರು ದ್ವಿತೀಯರಾದರು. ಫೀಲ್ಡ್ ಮಾರ್ಷಲ್ ಕಾರ್ಯಪ್ಪನವರು ಈಚೆಗೆ ಹೆಚ್ಚಾಗಿ ಬೆಂಗಳೂರಿನಲ್ಲಿಯೇ ಇರುತ್ತಿದ್ದರು. ನಿವೃತ್ತ ಸೈನಿಕರ ಯೋಗಕ್ಷೇಮ ಮತ್ತು ಯುವಕರನ್ನು ಮುಂದಿನ ಸತ್ಪ್ರಜೆಗಳನ್ನಾಗಿ ಮಾಡಲು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕೊನೆಯವರೆಗೂ ಜನ ಸಂಪರ್ಕ ಹೊಂದಿದ್ದರು. ಇವರಿಗೆ ಮಕ್ಕಳನ್ನು ಕಂಡರೆ ತುಂಬುಪ್ರೀತಿ. ಕೊಡಗಿನ ಮಕ್ಕಳು ರಸ್ತೆ ಎಡಬದಿಯಲ್ಲಿ ಶಿಸ್ತಿನ ಸಿಪಾಯಿಗಳಂತೆ ಹೋಗುವುದನ್ನು ಕಲಿಸಿದವರು ಫೀಲ್ಡ್ ಮಾರ್ಷಲ್ ಕಾರ್ಯಪ್ಪನವರು. ಕೊಡಗಿನ ಮಕ್ಕಳೆಲ್ಲಾ 'ಪ್ರೀತಿಯಅಜ್ಜ" ನಿಗೆ ಮಿಲಿಟರಿ ಸೆಲ್ಯೂಟ್ ಹೊಡೆಯುತ್ತಿದ್ದರು. ಇಂತಹ ಮಹಾಪುರುಷರ ನೆನಪು ಎಲ್ಲರಿಗೂ ಸ್ಫೂರ್ತಿದಾಯಕವಾಗಿದೆ. ಈ ಮಹಾ ಚೇತನ ಎಲ್ಲರಿಗೂ ಮಾರ್ಗದರ್ಶನ ನೀಡಬಲ್ಲದು. ಇವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಅನುಗ್ರಹಿಸಲೆಂದು ವಿನಮ್ರನಾಗಿ ಪ್ರಾರ್ಥಿಸುತ್ತೇನೆ.

### ಶ್ರದ್ಧಾಂಜಲಿ

ಶಿಸ್ತಿನ ಸಿಪಾಯಿಯಾಗಿ ವಿಶ್ವಭ್ರಾತೃತ್ವರೂವಾರಿಗಳಾಗಿ ಅಂತರಾಷ್ಟ್ರೀಯ ಖ್ಯಾತ ಸೇನಾನಿಯಾಗಿ ದೇಶದ ಮಹಾ ದಂಡನಾಯಕರಾಗಿ ಸೇವೆಸಲ್ಲಿಸಿದ್ದ ಫೀಲ್ಡ್ ಮಾರ್ಷಲ್ ಕೆ. ಎಂ ಕಾರ್ಯಪ್ಪನವರ ನಿಧನದಿಂದ ಭಾರತಕ್ಕೆ ತುಂಬಾ ನಷ್ಟ ಉಂಟಾಗಿದೆ. ಅವರ ತುಂಬು ಜೀವನದ ಆದರ್ಶ ಬದುಕು ಮುಂದಿನ ಪೀಳಿಗೆಯವರಿಗೆ ಒಂದು ಸ್ಫೂರ್ತಿ ಚೈತನ್ಯ. ಅವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಕರುಣಿಸಲೆಂದು ಪ್ರಾರ್ಥಿಸುತ್ತಾ, ಭಕ್ತಿಪೂರ್ವಕ ಶ್ರದ್ಧಾಂಜಲಿಯನ್ನ "ಸಿದ್ಧಗಂಗಾ" ಸಮರ್ಪಿಸಿದೆ.

## ‘ಶೂನ್ಯ ಸಂಪಾದನೆಯ ಪರಾಮರ್ಶೆ’

(ಒಂದು ಸ್ಥೂಲ ಪರಿಚಯ)

ಡಾ॥ ಗುರುಲಿಂಗ ಕಾಪಸೆ

‘ಶೂನ್ಯ ಸಂಪಾದನೆ’ ವಚನ ವಾಙ್ಮಯದ, ಶಿವಶರಣರ ಸಾಧನೆಯ ಒಂದು ಅಮೋಘಕೃತಿ. ಶರಣ ಸಾಹಿತ್ಯ ಅಂದರೆ ವಚನ ಸಾಹಿತ್ಯ ದೃಷ್ಟಿಗೊಂಡ ಮೂರು ಶತಮಾನಗಳ ತರುವಾಯ ‘ಶೂನ್ಯಸಂಪಾದನೆ’ ಗಳು ಸಂಯೋಜನೆಗೊಂಡವು. ಶಿವಗಣಪ್ರಸಾದಿ ಮಹಾದೇವಯ್ಯ, ಹಲಿಗೆ ದೇವರು, ಗುಮ್ಮಳಾಪುರ ಸಿದ್ಧಲಿಂಗಯತಿಗಳು ಮತ್ತು ಸಿದ್ಧವೀರಣ್ಣೊಡೆಯರು ಸಂಪಾದಿಸಿದ ಬೇರೆ ಬೇರೆ ಶೂನ್ಯಸಂಪಾದನೆಯ ಸಂಪುಟಗಳಿರುವುದು ಈಗ ಎಲ್ಲರಿಗೂ ತಿಳಿದುಬಂದಿರುವ ವಿಷಯ. ಪ್ರೊ.ಸಂ ಶಿ. ಭೂಸನೂರ ಮಠ ಅವರ ಪರಾಮರ್ಶೆಗೆ ಗೂಳೂರು ಸಿದ್ಧ-ವೀರಣ್ಣೊಡೆಯರ “ಶೂನ್ಯಸಂಪಾದನೆ”ಯೇ ಆಕರವಾಗಿದೆ.

ಗೂಳೂರು ಸಿದ್ಧವೀರಣ್ಣೊಡೆಯರ ‘ಶೂನ್ಯಸಂಪಾದನೆ’ ಯನ್ನು ಆಧರಿಸಿಯೇ ತಮ್ಮ ಪರಾಮರ್ಶೆಯನ್ನು ಪ್ರೊ.ಸಂ.ಶಿ. ಭೂಸನೂರ ಮಠ ಅವರು ಬರೆದಿದ್ದರೂ ಅದನ್ನು ಇದ್ದಕ್ಕಿದ್ದಂತೆ ಅನುಸರಿಸಿಲ್ಲ. ತಮ್ಮದೆಆದ ರೀತಿಯಲ್ಲಿ ‘ಶೂನ್ಯಸಂಪಾದನೆ’ಯ ತಾತ್ವಿಕ ವಿವೇಚನೆಯನ್ನು ಅವರು ಮಾಡಿದ್ದು ಗಮನಾರ್ಹವಾಗಿದೆ. ಅಲ್ಲಿಯ ಇಪ್ಪ-ತ್ತೊಂದು ಅಧ್ಯಾಯಗಳನ್ನು ತಮ್ಮ ಗ್ರಂಥದ ಹದಿನೇಳು ಅಧ್ಯಾಯಗಳಲ್ಲಿ ಪರಾಮರ್ಶಿಸಿದ ಪ್ರೊ. ಭೂಸನೂರುಮಠ ಅವರು ಪೀಠಿಕೆಯ ರೂಪದಲ್ಲಿ ಶೂನ್ಯತ್ವ ತಾತ್ವಿಕ ಚಿಂತನೆಯನ್ನು ಆರಂಭದ ಮೂರು ಅಧ್ಯಾಯಗಳಲ್ಲಿ ಮಾಡಿದ್ದು, ಅವರ ಸೂಕ್ಷ್ಮಜ್ಞತೆಗೆ ಕುರುಹಾಗಿದೆ. ಅಷ್ಟಲ್ಲದೆ ಕೊನೆಯಲ್ಲಿ “ಆಡಂಬರ ವಿದೇನೋ” ಎಂಬ ಸಮಾರೋಪದ ಸ್ವತಂತ್ರ ಅಧ್ಯಾಯವೂ ಇದೆ. ಒಟ್ಟು ಇಪ್ಪತ್ತೊಂದು ಅಧ್ಯಾಯಗಳ ಲೆಕ್ಕಕ್ಕೆ ಸರಿ. ಹೊಂದುವ ಈ ಗ್ರಂಥದ ಶೀರ್ಷಿಕೆಗನುಗುಣವಾದ ವ್ಯಾಪಕವಾದ ಚರ್ಚೆಗಳು ಅತ್ಯಂತ ವೈಶಿಷ್ಟ್ಯ ಪೂರ್ಣವಾಗಿರುವುದನ್ನು ಗುರುತಿಸಬಹುದು.

“ಶೂನ್ಯಸಂಪಾದನೆ” ಶರಣರು ಮುಖಾಮುಖಿಯಾಗಿ ಚರ್ಚಿಸುವ, ತಮ್ಮ ತಮ್ಮ ಸಾಧನೆಯಸ್ತರಗಳನ್ನು ಗುರುತಿಸಿಕೊಳ್ಳುವ, ಅಲ್ಲಮಪ್ರಭುವಿನ ಮಾರ್ಗದರ್ಶನ ಪಡೆಯುವ, ಅವರವರ ಅನುಭವಪೂರ್ಣ ವಚನಗಳ ಮೂಲಕವಾಗಿಯೇ ಸಂಭಾಷಿಸುವ ಒಂದು ರೂಪಕ ಕಾವ್ಯವಾಗಿದ್ದರೆ ಭೂಸನೂರಮಠ ಅವರ ಪರಾಮರ್ಶೆ ಶರಣರ ಸಾಧನೆಯ ಮೇಲೆ ಬೆಳಕು ಚೆಲ್ಲುವ, ತಮ್ಮ ವೈಯಕ್ತಿಕ ಅನುಭವ, ಅನುಭಾವಗಳ ಒಪ್ಪವಿಟ್ಟು ವಿವೇಚಿಸುವ, ವಚನಗಳ ನೆರವು ಪಡೆದೂ ಆಧುನಿಕ ಗದ್ಯವಾಗಿ ಕಸಿಗೊಳ್ಳುವ ಒಂದು ವಿಮರ್ಶನ ಗ್ರಂಥವಾಗಿ ರೂಪುಗೊಂಡಿದೆ. ಸೃಜನ ಶೀಲವಾಗಿದ್ದೂ ಸೃಜನೇತರ



ಕೃತಿಯಾಗಿಯೇ ನಮ್ಮ ಸಾಹಿತ್ಯದಲ್ಲಿ ಒಂದು ಮೈಲುಗಲ್ಲಾಗಿ ಉಳಿಯುವ ಅಮೌಲ್ಯ ಗ್ರಂಥವಿದಾಗಿದೆ. ಸಾವಿರ ಪುಟಗಳಷ್ಟು ವಿಸ್ತಾರವಾಗಿರುವ ಈ ಬೃಹತ್ಕೃತಿಯ ಸಾರವನ್ನು ಸ್ವಲ್ಪದರಲ್ಲಿ ಸಂಗ್ರಹಿಸುವುದು ಕರಿಯ ಕನ್ನಡಿಯಲ್ಲಿ ಹಿಡಿದಿಡುವ ಒಂದು ಸಾಹಸದ ಪ್ರಯತ್ನವಾಗುತ್ತದೆ.

ಪ್ರೊ ಸಂ-ಶಿ, ಭೂಸನೂರಮಠ ಅವರ ಪರಾಮರ್ಶೆ ಪ್ರಾರಂಭವಾಗುವುದು ‘ಇಂದಿನ ನಾಳೆ’ ಎಂಬ ಅಧ್ಯಾಯದಿಂದ. ಆಧುನಿಕ ಜಗತ್ತಿನ ವಿಜ್ಞಾನದ ಬೆಳವಣಿಗೆಯನ್ನು ಗುರುತಿಸಿ ‘ವಿಶ್ವಜೀವನ,ದ ಅಂಗವಾದ ಮಾನವ ಜೀವನದ ಅರ್ಥವನ್ನು ಹುಡುಕಿಕೊಳ್ಳುತ್ತ ಅನುಭಾವದ ಕಡೆಗೆ ಬೆರಳು ಮಾಡಿ ತೋರಿಸಿ ವ್ಯವಹಾರಿಕ ಜಗತ್ತಿನ “ಹಗಲು ಕತ್ತಲೆ” ಯನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ‘ಯಾರು ನಾನು?” ಎಂದು ಪ್ರಶ್ನಿಸಿ ‘ನಾನು” ಎಂಬ ಅಹಂಭಾವದ ಒಳಗೇ ಇರುವ ಗುಹೇಶ್ವರ ಲಿಂಗದ ಅಸ್ತಿತ್ವವನ್ನು ಅನೇಕ ಉದಾಹರಣೆಗಳಿಂದ ಕಂಡುಕೊಳ್ಳುವ ರೀತಿ ತುಂಬ ಮನೋಜ್ಞವಾಗಿದೆ. “ಏನಿದೆಎಲ್ಲಿ” ಎಂಬಲ್ಲಿ ಆತ್ಮತತ್ತ್ವವನ್ನು ಶೋಧಿಸಿಕೊಡಲಾಗಿದೆ, “ಈ ಶೂನ್ಯ, ಈ ಲಿಂಗ, ಈ ಬ್ರಹ್ಮ, ಈ ದೇವರು ಎಲ್ಲಿದ್ದಾನೆ? ಸರ್ವಭೂತದಲ್ಲಿ ಮಾನವ ಬೀಜದಲ್ಲಿ, ಮಾನವಬೀಜದ ಮಹಾಫಲವಾದ ಶರಣನಲ್ಲಿ .... ಅರಿಯಬಲ್ಲಡೆ ಗುಹೇಶ್ವರ ಲಿಂಗವು ಹೃದಯದಲ್ಲಿದ್ದಾನೆ” ಇದು ಅದರ ಒಟ್ಟು ತಿರುಳು. ಒಂದಿದ್ದು ಎರಡಾದ ಅಥವಾ ಹಲವಾದ, ಒಂದರ ಅವಿಭಾಜ್ಯ ಅಂಗವೆನಿಸಿದ ಜೀವನು ಜಡಜ್ಞಾನಕ್ಕೊಳಗಾಗಿ ತನ್ನನ್ನು ತಾನು ಮರೆತ, ಮತ್ತೆ ತನ್ನರಿವಿನಿಂದಲೇ ತನ್ನನ್ನು ತಾನರಿತು ಶೂನ್ಯದೊಂದಿಗೆ ಬೆರೆತ ವಿಷಯದ ಹರವು ,ಒಂದು ಎರಡು ಎಂಬ ಅಧ್ಯಾಯದಲ್ಲಿದೆ.

ಲೌಕಿಕ ಆಗು-ಹೋಗುಗಳನ್ನು ಗುರುತಿಸುತ್ತ, ಅದರ ಅಂತರಂಗದಲ್ಲಿರುವ ಗುಹೇಶ್ವರ ಲಿಂಗವನ್ನು ಕಂಡುಕೊಳ್ಳುತ್ತ ಪರಾಮರ್ಶೆಯ ಅಧ್ಯಾಯಗಳು ಮುಂದುವರಿಯುತ್ತವೆ. ಈ ಅಧ್ಯಾಯಗಳಲ್ಲಿ ಷಟ್‌ಸ್ಥಲಕ್ಕೆ ಹಿನ್ನಲೆಯಾಗಿರುವ ಪಿಂಡಸ್ಥಲ, ಪಿಂಡಜ್ಞಾನ ಸ್ಥಲ, ಸಂಸಾರ ಹೇಯ ಸ್ಥಲ, ಮಾಯಾವಿಲಾಸ ವಿಡಂಬನ ಸ್ಥಲ ಇವುಗಳ ಅರ್ಥಪೂರ್ಣವಾದ ವಿವೇಚನೆ ನಡೆಯುತ್ತದೆ. ಈ ವಿವೇಚನೆ ಹೆಚ್ಚು ಸೈದ್ಧಾಂತಿಕವಾದುದು. “ಎಚ್ಚರಿಸಿದ ಗುರು–ತಂದೆ” ಎಂಬ ಅಧ್ಯಾಯದಲ್ಲಿ ದಿವ್ಯ ಜೀವನದ ಅನುಭಾವ ಮಾರ್ಗದಲ್ಲಿ ಪಿಂಡಸ್ಥಲವೇ ಮೊದಲ ಹೆಜ್ಜೆ“ ಎಂದು ಹೇಳಿದ ಪರಾಮರ್ಶಕರು ಗುರುವಿನ ಮಹತ್ವವನ್ನು ಗುರು ಕಾರುಣ್ಯವನ್ನು–ಧಾರ್ಮಿಕ ಮತ್ತು ತಾತ್ವಿಕ ಸ್ತರದ ಮೇಲೆ ಚರ್ಚೆಗೆ ಒಳಪಡಿಸುತ್ತಾರೆ. ಷಟ್‌ಸ್ಥಲ ಮಾರ್ಗದ ಅನುಸಂಧಾನದ ವಿಷಯ ಹಿಗ್ಗುತ್ತ,

ಬೆಳೆಯುತ್ತ ಬೆಳಗೆದ್ದು ಪೂಜೆ" ಸುಳಿದಾಡುವಲಿಂಗ ಮುಂತಾದವುಗಳಲ್ಲಿ ಅರ್ಥವ್ಯಾಪ್ತಿಯನ್ನೂ ಅನುಭವದ ದೀಪ್ತಿಯನ್ನೂ ಪಡೆದುಕೊಳ್ಳುತ್ತದೆ. ಅನಿಮಿಷನೋಟದಲ್ಲಿ ಅಲ್ಲಮಪ್ರಭು ಮಾಯಾಕೋಲಾಹಾಲನಾಗಿ ಕಾಣಿಸಿಕೊಳ್ಳುತ್ತಾನೆ. ಈ ಅನಿಮಿಷ 'ನೋಟದಲ್ಲಿಯೇ ಬರುವ ಇನ್ನೊಬ್ಬ ಸಾಧಕ ಗೊಗ್ಗಯ್ಯ. ಚಿದಖಂಡ ಜ್ಯೋತಿಯಾದ ಇಷ್ಟಲಿಂಗದ ವಿಚಾರವನ್ನು ಅನುಭಾವದ ಎತ್ತರದಲ್ಲಿ ವಿವೇಚಿಸುವ ಪ್ರೊ. ಭೂಸನೂರಮಠ ಅವರ ಪರಾಮರ್ಶೆ ಭಾವನಾತ್ಮಕತೆಯನ್ನು ಮೀರಿ, ವೈಚಾರಿಕ ಎತ್ತರದಲ್ಲಿ ಹೊಸತನವನ್ನು ಪಡೆದುಕೊಳ್ಳುತ್ತಿರುವುದನ್ನು ಕಾಣಬಹುದು.

ಶೂನ್ಯಸಂಪಾದನೆಗೆ ಸೂಕ್ತ ಪೀಠಿಕೆಯನ್ನು ನಿರ್ಮಿಸಿಕೊಂಡ ಪ್ರೊ. ಭೂಸನೂರಮಠ ಅವರು 'ಕೂಡಲಿಲ್ಲ–ಅಗಲಿಲ್ಲ" ಎಂಬ ಅಧ್ಯಾಯದಿಂದ ಶೂನ್ಯತತ್ವದ ಸಮಾಲೋಚನೆಗೆ ತೊಡಗುತ್ತಾರೆ. ಅಜಗಣ್ಣನನ್ನು ಕಳೆದುಕೊಂಡ ಮುಕ್ತಾಯಕ್ಕ ಕರೆಕಟ್ಟಿಸುವಲ್ಲಿ ತನ್ಮಯನಾದ ಸಿದ್ಧರಾಮ ಇವರ ಸನ್ನಿವೇಶಗಳು ಶೂನ್ಯಸಂಪಾದನೆಯ ಪಡಿನೆಳಲಾಗಿಯೂ ಪೂರ್ಣತ್ವದ, ದಿವ್ಯ ಜೀವನದ, ಶಿವಯೋಗದ ಮಹತ್ವವನ್ನು ತಿಳಿಸಿಕೊಡುತ್ತವೆ. ‹‹ಮಹಾಮನೆ" ಶರಣಗೋಷ್ಠಿ" ಮುಂತಾದವು ಬಸವಣ್ಣ ಚೆನ್ನಬಸವಣ್ಣ, ಅಲ್ಲಮಪ್ರಭು ಮೊದಲಾದವರ ಘನತೆಯನ್ನು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಮುಂತಾದ ತಾತ್ತ್ವಿಕ ವಿಚಾರಗಳನ್ನು ಸಾರ್ಥಕವಾಗಿ ತಿಳಿಸಿಕೊಡುತ್ತವೆ ಶರಣರ ಅನುಭಾವ ಮಾರ್ಗದಲ್ಲಿ ಕಾಯಕತತ್ತ್ವವೂ ಒಂದು. ದುಡಿದುಣ್ಣುವ ದೃಷ್ಟಿಕೋನ, ಅಸಂಗ್ರಹ ಧೋರಣೆ–ಮುಂತಾದವುಗಳು ಪ್ರಗತಿಪರವಾದ ನಿಲುವುಗಳು. ಸತ್ಯಶುದ್ಧ ಕಾಯಕಕ್ಕೆ ಶರಣರು ನೀಡಿದ ಸ್ಥಾನ ಅನುಭಾವಿತವಾದುದು. ಆಯ್ದಕ್ಕಿ ಮಾರಯ್ಯ, ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ ಇವರ ನಿಷ್ಠೆಯಲ್ಲಿ ಕಾಯಕವು ಶರಣರ ಸಿದ್ಧಿಯಾಗಿಯೇ ಪ್ರಕಟಗೊಂಡಿದೆ. ಈ ಬಗೆಯ ಕಾಯಕ ಸಿದ್ಧಿ ಬೇರೆಡೆಯಲ್ಲಿ ದೊರೆಯಲಾರದು. "ನನಗೆ ಬೇಕು ಎಂದು ದುಡಿದರೆ ವೃತ್ತಿ, ಸಂಸಾರ ಮುಖವಾದ ಪ್ರವೃತ್ತಿ, ನಿಮಗೆ ಎತ್ತಾಗಿ–ತೊತ್ತಾಗಿ. ನಿಮ್ಮ ‹‹ಬಾಗಿಲಗಾಹಿ' ಯಾಗಿ, ನಿಮ್ಮಆಳಿನ ಆಳಾಗಿ ನಿಮಗೆಂದು ಕಾಯಕಷ್ಟ ಮಾಡಿ ನಿರ್ವಂಚಕ ಬುದ್ಧಿಯಿಂದ ದುಡಿದು ನಿಮ್ಮ ಸೊಮ್ಮನ್ನು ನಿಮಗೆ ಸಲ್ಲಿಸಿದರೆ ಅದು ಕಾಯಕ ಇದು ಕಾಯಕ ಕುರಿತು ಪ್ರೊ. ಭೂಸನೂರಮಠ ಅವರು ನೀಡಿದ ಒಂದು ವ್ಯಾಖ್ಯಾನ.

ಘಟ್ಟಿವಾಳಯ್ಯ ಮತ್ತು ಮಹಾದೇವಿಯಕ್ಕಗಳ ಸಂಪಾದನೆಗಳು ಪರಾಮರ್ಶೆಯಲ್ಲಿ "ನಿರ್ಭಯದ ನಿಲುವು-ಚೆಲುವು" ಆಗಿ ರೂಪುಗೊಂಡಿವೆ. ಲೋಕದೊಳಗಿದ್ದೂ ಇಲ್ಲದ ಮಹಿಮ 'ಘಟ್ಟಿವಾಳಯ್ಯ' ಅಂಗಸಂಗವತೊರೆದು ಲಿಂಗಸಂಗದೊಳು ಅವಿರಳ



ಸಂಗಿಯಾದವಳು' ಅಕ್ಕಮಹಾದೇವಿ. ಬಸವಣ್ಣನವರ ಅನುಭಾವ ಸಿದ್ಧಿಯನ್ನು ಪ್ರಭುದೇವರ ವ್ಯೋಮಕಾಯದ ಸ್ವರೂಪವನ್ನು "ಸ್ವಯಮೇವ"ದಲ್ಲಿ ಗುರುತಿಸಲಾಗಿದೆ. ಹರಳಯ್ಯ-ಮಧುವರಸರ ಆಪ್ತತ್ವದ ಐತಿಹ್ಯ ಬಸವಣ್ಣನವರ ಸಾಧನೆಯಲ್ಲಿ ಸಾಮಾಜಿಕ ಪರಿವರ್ತನಾ ಕಾರ್ಯದಲ್ಲಿ ಒಂದು ಕ್ರಾಂತಿಕಾರಕವಾದ ಘಟ್ಟ, ಇದು ಬಸವಣ್ಣನವರ ಜೀವಮಾನದ ಅಂತಿಮ ಕೊಡುಗೆಯೂ ಆಗುತ್ತದೆ. ತನಿರಸತುಂಬಿದ ಅಮೃತ ಫಲ (ಒಳಗೆ ಕ್ರಾಂತಿಯ ಬಿಸಿಯಿದ್ದರೂ) ಒಮ್ಮೆಂಗೆ ತೊಟ್ಟು ಕಳಚಿದಂತೆ, ಬಸವಣ್ಣ ನಿಷ್ಪತ್ತಿಯೆಂಬ ಹಣ್ಣಾಗಿ ತೊಟ್ಟುಬಿಟ್ಟನು. ಕೂಡಲಸಂಗ ತನಗೆ ಬೇಕೆಂಧು ಎತ್ತಿ-ಕೊಂಡನು. 'ಮೂರ್ತಿಯಾದುದಕ್ಕೆ ಪ್ರಳಯ ತಪ್ಪದು ಗುಹೇಶ್ವರಾ' ಎಂಬುದುಪ್ರಭುದೇವರಉಕ್ತಿ, ಸಮರಸೈಕ್ಯ ಪಡೆದದ್ದು ಬಯಲಿಗೆ ಬಯಲಾದದ್ದು ಶರಣರ ಜೀವನದ ಸಿದ್ಧಿಯೂ ಅಹುದು.

ಶೂನ್ಯಸಂಪಾದನೆಯ ಪರಾಮರ್ಶೆ ಒಂದು ಅದ್ವಿತೀಯವಾದ ಕೃತಿ. ಅಮೂರ್ತವಾದ ಅದರಲ್ಲೂ ಅನುಭಾವ ಲೋಕಕ್ಕೆ ಸಂಬಂಧಿಸಿದ ಅತ್ಯಂತ ಗಹನವಾದ ತತ್ತ್ವವನ್ನು ವಿವೇಚಿಸುವುದು ಒಂದು ಅಸಾಮಾನ್ಯವಾದ ಕಾರ್ಯ. ಇಂಥ ಬೃಹತ್‌ಕೃತಿ ರಚನೆಗೆ ಒಂದು ಜೀವಮಾನದ ಸಾಧನೆ ಬೇಕಾಗುತ್ತದೆ. ಮಹಾಕವಿ ಕುವೆಂಪು ಅವರು ನುಡಿದಂತೆ ಇದು "ಒಂದು ಸಾಂಸ್ಕೃತಿಕ ಸಾಹಸ ಇನ್ನೊಬ್ಬ ಮಹಾಕವಿ ವಿ. ಕೃ. ಗೋಕಾಕರು ಅಭಿಪ್ರಾಯಪಟ್ಟಂತೆ ‹‹ವಾಙ್ಮಯ ತಪಸ್ಸಿನ ಫಲ" ಕನ್ನಡದಲ್ಲಿ ಇದೊಂದು ಅಪರೂಪದ ಕೃತಿಯೆಂಬುದರಲ್ಲಿ ಸಂದೇಹವೆ ಇಲ್ಲ. ಪ್ರೊ. ಕೀರ್ತಿನಾಥ ಕುರ್ತಕೋಟಿಯವರು ‹‹ಕನ್ನಡ ಯಾವ ಮಹಾಕೃತಿಯ ಬಗ್ಗೆಯೂ ಇಷ್ಟು ಸಮರ್ಥವಾಗಿ ವಿವೇಚನೆ ಬಂದಿಲ್ಲ." ಎಂದು ನುಡಿದದ್ದು ಶೂನ್ಯ ಸಂಪಾದನೆಯ ಪರಾಮರ್ಶೆಯನ್ನು ಕುರಿತಾದ ಒಂದು ವಸ್ತುನಿಷ್ಠ ಪ್ರಶಸ್ತಿಯಾಗಿದೆ.

ದ್ವೈತವಾದ ಸೃಷ್ಟಿಯಲ್ಲಿ ಅಂತರಂಗ-ಬಹಿರಂಗಗಳ ಒಳಗುಟ್ಟನ್ನು ತಿಳಿಯುವ ಪರಿ 'ಪರಾಮರ್ಶೆ" ಯ ಉದ್ದಕ್ಕೂ ಚಾಚಿಕೊಂಡಿದೆ. ಬಹುಶ್ರುತರಾದ, ವಿಜ್ಞಾನ-ತತ್ತ್ವಜ್ಞಾನಗಳೆರಡನ್ನುಅರಿತುಕೊಂಡಿರುವ ಪ್ರೊ.ಸಂ. ಶಿ' ಭೂಸನೂರಮಠ ಅವರು ತಮ್ಮ ವಿವೇಚನೆಯಲ್ಲಿ ಒಳಪದರಗಳನ್ನು ಬಿಚ್ಚಿ ನೋಡುತ್ತ, ಸೂಕ್ಷ್ಮಸ್ತರಗಳನ್ನು ಮೀಟುತ್ತ ತೀರ ಆತ್ಮೀಯವಾಗಿಯೇ ಬರವಣಿಗೆ ಮಾಡಿದ್ದು ಒಂದು ವಿಶೇಷವಾಗಿದೆ. ‹‹ಎರಡರ ತಾಯಿ ಬಿಂದು' ಎಂದು ಅವರು ಹೇಳುವಲ್ಲಿ ಶೂನ್ಯದ ಅರ್ಥ ಹೇಗೆ ಬಿಚ್ಚಿಕೊಳ್ಳುತ್ತದೆಂಬುದನ್ನು ಗುರುತಿಸಬಹುದು.

ಆಧ್ಯಾತ್ಮ ವಿಷಯವನ್ನು ಮನದಟ್ಟು ಮಾಡಿಕೊಡುವಲ್ಲಿ ಪ್ರೊ. ಭೂಸನೂರ ಮಠ ಅವರ ಭಾಷೆ ವಿವರಗೊಳ್ಳುತ್ತದೆಯೇ ಹೊರತು ಕ್ಲಿಷ್ಟವಾಗುವುದಿಲ್ಲ. ಸಹಜ, ನೇರ, ಸ್ಪಷ್ಟ ನಿರೂಪಣೆ ಅವರದು. ಅತ್ಯಂತ ಮುಕ್ತವಾಗಿಯೇ ಚರ್ಚಿಸುವುದು ಅವರ ಜಾಯಮಾನ. ಉದಾಹರಣೆಗೆ, ಈ ವಾಖ್ಯಾವಳಿಯನ್ನು ನೋಡಬಹುದು "ಹೊಟ್ಟೆ ಹಸಿದರೆ ರೊಟ್ಟಿ ಕೊಡಬಹುದು. ಮನ ಹಸಿದರೆ ಹೊನ್ನು ಹೆಣ್ಣು ಮಣ್ಣು ಸಿಕ್ಕಬಹುದು. ಭಾವ ಹಸಿದರೆ ಗೀತಸಾಹಿತ್ಯ ನೋಡಬಹುದು. ಆದರೆ ಇದಕ್ಕೆಲ್ಲ ಪರಮಾಧಾರವಾದ ಅರಿವಿನ ಆಕಾರ ಹಸಿದನೆಂದರೆ.... _ ..... ಎಂಬಲ್ಲಿಯ ವಿಚಾರ ಸರಣಿ ಸಹಜವಾಗಿಯೇ ಭೌತಿಕದಿಂದ ಆಧ್ಯಾತ್ಮಿಕದ ಕಡೆಗೆ ಸೆಳೆದೊಯ್ಯುತ್ತದೆ. ಅರಿವಿನ ಅಪ್ಯಾಯನಕ್ಕೆ ಅನುಭವವೇ ತೃಪ್ತಿ' — ಎಂಬ ಬಸವಣ್ಣನವರ ಉಕ್ತಿಯಂತೆ, 'ಅರಿವಿನ ಅಧ್ಯಯನಕ್ಕೆ ಶೂನ್ಯ ತತ್ತ್ವದ ಸ್ಪಷ್ಟ ಜ್ಞಾನಕ್ಕೆ ಶೂನ್ಯ ಸಂಪಾದನೆಯ ಪರಾಮರ್ಶೆಯೇ ಒಂದು ದೀಪಸ್ತಂಭವೆಂದು ಹೇಳಬಹುದು.

(" ಶೂನ್ಯಸಂಪಾದನೆಯ ಪರಾಮರ್ಶೆ " ಗೆ ಪಂಪಪ್ರಶಸ್ತಿ ಬಂದ ಸಂದರ್ಭದಲ್ಲಿ ಧಾರವಾಡ ಆಕಾಶವಾಣಿಯಿಂದ ಮಾಡಿದ ಭಾಷಣ.)





# ವಿಜ್ಞಾನ ಮತ್ತು ಧರ್ಮ

ಡಾ॥ ಸರ್ಜಾ ಚಂದ್ರಶೇಖರಯ್ಯ, ರಾಘವೇಂದ್ರ ನಿಲಯ ಬಿ. ಹೆಚ್. ರಸ್ತೆ ಶಿವಮೊಗ್ಗ.

ಪ್ರಾಚೀನ ಅರ್ವಾಚೀನ ಕಾಲದಿಂದಲೂ ವೈಜ್ಞಾನಿಕ ದೃಷ್ಟಿಯನ್ನು ಬೆಳಸಿಕೊಂಡವರು ಇದ್ದರು. ಕ್ರಿ. ಪೂರ್ವದಿಂದಲೂ ನೀರಿನ ಸಾಂದ್ರತೆಯನ್ನು ಕಂಡು ಹಿಡಿದ ಆರ್ಕಿಮಿಡೀಸ್, ಗೆಲಿಲಿಯೋ, ಕೋಪರ್ನಿಕಸ್ ಮುಂತಾದ ವಿಜ್ಞಾನಿಗಳಿದ್ದರು. ಅವರ ವೈಜ್ಞಾನಿಕ ಸಿದ್ಧಾಂತಗಳನ್ನು ಮತಾಂಧರು ವಿರೋಧಿಸಿದರೂ ಅವರು ತಮ್ಮ ವೈಜ್ಞಾನಿಕ ಸತ್ಯಕ್ಕೆ ಅಂಟಿಕೊಂಡಿದ್ದರು. ನಮ್ಮ ಭಾರತದಲ್ಲಿಯೂ ಆರ್ಯ ಭಟ್ಟ' ಭಾಸ್ಕರಾಚಾರ್ಯರಂತಹ ಖಗೋಳ ವಿಜ್ಞಾನಿಗಳೂ, ಗಣಿತಶಾಸ್ತ್ರಜ್ಞರೂ ಇದ್ದರು. 'ಶೂನ್ಯ' ವನ್ನು ಮೊದಲು ಕಂಡುಹಿಡಿದವರು ಭಾರತೀಯರು. ಇಂಗ್ಲೆಂಡ್‌ನಲ್ಲಿ ಬೇಕನ್ ಮಹಾಶಯನು' ಜನರಿಗೆ ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳಲು ಪ್ರಚೋದನೆಕೊಟ್ಟನು. ಮಿಲಿಯನ್ ಗಟ್ಟಳೆ ವರ್ಷಗಳ ಹಿಂದೆ ಹುಟ್ಟಿದ ಭೂಖಂಡವು ಸಾಧಿಸಲಾರದ ವೈಜ್ಞಾನಿಕ ಆವಿಷ್ಕಾರಗಳು, 19ನೆಯ 20ನೆಯ ಶತಮಾನದಲ್ಲಿ ಅಂದರೆ ಒಂದೇ ಒಂದು ನೂರು ವರ್ಷದಲ್ಲಿ ಇಡೀ ಜಗತ್ತಿಗೆ ಹೊಸ ಕ್ಷಿತಿಜವನ್ನು ತೋರಿಸಿದವು. ಈಗ ಮಾನವನು ಹಕ್ಕಿಯಂತೆ ಗಗನದಲ್ಲಿ ಹಾರಾಡಬಲ್ಲ ನೀರಿನಲ್ಲಿ ಮೀನಿನಂತೆ ಈಜಾಡಬಲ್ಲ. ಅಂತರಿಕ್ಷದಲ್ಲಿ ಮನೆಯನ್ನು ಮಾಡಿಕೊಂಡು ವಾಸಮಾಡುವ ಹಂತದಲ್ಲಿದ್ದಾನೆ. ಮಾನವ ಚಂದ್ರಲೋಕಕ್ಕೆ ಹೋಗಿ ಅಲ್ಲಿಯ ನೆಲದ ಮೇಲೆ ಲೀಲಾಜಾಲವಾಗಿ ನಡೆದಾಡಿದ. ಅಮೇರಿಕನ್ ಅಧ್ಯಕ್ಷರು ಅಮೇರಿಕನರನ್ನು ಉದ್ದೇಶಿಸಿ ಮಾತಾಡಿದ್ದನ್ನು ಆ ಕ್ಷಣದಲ್ಲಿ ನಾವು ನೋಡಬಹುದು. ಎಲ್ಲಿಯೋ ನಡೆಯುತ್ತಿರುವ ಕ್ರಿಕೆಟ್ ಮ್ಯಾಚನ್ನು, ಆಟದ ಮೈದಾನದ ಪ್ರೇಕ್ಷಕರಂತೆ ನಾವು ಮನೆಯಲ್ಲಿಯೇ ಕುಳಿತುಕೊಂಡು, ದೂರದರ್ಶನದಲ್ಲಿ ನೋಡಬಹುದು. ಮರಣಾಂತಿಕವಾದ ಕ್ಯಾನ್ಸರ್ ರೋಗವನ್ನು, ಮುಂಚಿತವಾಗಿ ಕಂಡು ಹಿಡಿದರೆ, ರೋಗಿಯು ಹಲವಾರು ವರ್ಷಗಳ ಕಾಲ ಬದುಕಬಹುದು.

ಪಾಶ್ಚಿಮಾತ್ಯರು ಸಾಧಿಸುತ್ತಿರುವ ಹೊಸ ಹೊಸ ವೈಜ್ಞಾನಿಕ ಆವಿಷ್ಕಾರಗಳನ್ನು ನಮ್ಮ ಭಾರತೀಯರು ಏಕೆ ಕಂಡು ಹಿಡಿಯಲಿಲ್ಲ ಮತ್ತು ಪ್ರಾಚೀನ ಕಾಲದಲ್ಲಿ ಭಾರತೀಯರ ವೈಜ್ಞಾನಿಕ ಸಿದ್ಧಾಂತಗಳು ಏಕೆ ಸ್ಥಗಿತಗೊಂಡವು ಎಂಬ ಪ್ರಶ್ನೆ ನಮ್ಮ ಮುಂದೆ ನಿಲ್ಲುತ್ತದೆ. ಧರ್ಮೋಪದೇಶಕರು ಈ ಮರ್ತ್ಯ ಜೀವನವು ಏನೆಂದರೂ ಕ್ಷಣಿಕ, ನಮ್ಮ ಬಾಳಿನ ಗುರಿಯು ಮೋಕ್ಷವಾಗಿರಬೇಕೆಂಬುದನ್ನು ಸಾಮಾನ್ಯ ಜನರು ತಪ್ಪಾಗಿ ಅರ್ಥೈಸಿ ಇಹಜೀವನಕ್ಕೆ ವಿಮುಖರಾದರು. ಇಹ-ಪರಗಳೆರಡನ್ನು ಸಮನ್ವಯಗೊಳಿಸಿಕೊಂಡು ಬಾಳಬೇಕೆಂಬುದನ್ನು ಮರೆತರು. ಈಗ ವಿಜ್ಞಾನವೂ ಧಾರ್ಮಿಕ ಮೌಲ್ಯಗಳೂ ಒಟ್ಟಾಗಿ ಬಾಳಬಲ್ಲವೇ ? ಎಂಬುದನ್ನು ನಾವು ಆಲೋಚಿಸಬೇಕು.

ಚಂದ್ರಲೋಕದಲ್ಲಿ ಮಾನವ ನಡೆದಾಡುವಂತೆ ಮಾಡಿದ ವಿಜ್ಞಾನಿಗಳನ್ನು ನಾವು ಮೆಚ್ಚಿಕೊಳ್ಳಬೇಕು. ಪರಸ್ಪರ ವೈಷಮ್ಯದಿಂದ, ಹಿರೋಷಿಮಾ ನಾಗಾಸಾಕಿಗಳಂತಹ ದೊಡ್ಡ ನಗರಗಳ ಮೇಲೆ ಆಟಮ್ ಬಾಂಬು ಎಸೆದು. ಅವುಗಳನ್ನು ನರಕ ಸದೃಶ್ಯವನ್ನಾಗಿ ಮಾಡಿದ್ದನ್ನು ನಾವು ಹೇಗೆ ಮರೆಯೋಣ ? ಇದನ್ನು ನೋಡಿ ಖತಿಗೊಂಡ ಅಣುವಿಜ್ಞಾನಿ ಐನ್‌ಸ್ಟೀನನು, ವಿಜ್ಞಾನದ ದುರುಪಯೋಗವನ್ನು ಕಂಡು ಮರುಗಿದ.

ಈ ಬ್ರಹ್ಮಾಂಡ ಸೃಷ್ಟಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದ ಐನ್‌ಸ್ಟೀನ್ ನಂತಹ ವಿಜ್ಞಾನಿಗಳು ನಮಗೂ ಮೀರಿದ ಒಂದು ದೈವೀಶಕ್ತಿ ಇದೆ ಎಂದು ಪ್ರಾಂಜಲವಾಗಿ ಒಪ್ಪಿಕೊಂಡಿದ್ದಾರೆ. ಇದರಿಂದ ನಾವು ವಿಜ್ಞಾನ ಮತ್ತು ಧರ್ಮದ ಮೂಲ ತತ್ವಗಳನ್ನು ಸಮನ್ವಯ ಮಾಡಿಕೊಂಡಾಗ ಮಾತ್ರ ಜಗತ್ತಿನ ಉದ್ಧಾರವಾಗುತ್ತದೆ. ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಇಲ್ಲಿ ಧರ್ಮವೆಂದರೆ ಮತಾಂಧತೆಯಲ್ಲ, ಗೊಡ್ಡು ಸಂಪ್ರದಾಯಗಳ ಕಂತೆಯಲ್ಲ. ಪಶುತ್ವದಿಂದ ಮಾನವೀಯತೆಗೆ, ಕ್ರಮೇಣ ದೈವತ್ವಕ್ಕೇರುವ ಸೋಪಾನವಾಗಿದೆ. ಎಲ್ಲ ಮಾನವರನ್ನೂ ಒಂದುಗೂಡಿಸುವ ಒಂದು ಜೀವಂತ ಸರಪಳಿಯಾಗಿದೆ. ಧರ್ಮ ಇರುವುದು ಮತ ವೈಷಮ್ಯವನ್ನುಂಟು ಮಾಡುವುದಕ್ಕಲ್ಲ. ದಯವೇ ಧರ್ಮದ ಮೂಲವಯ್ಯಾ, ಸಕಲ ಜೀವಿಗಳ ಲೇಸನ್ನೆ ಬಯಸುವುದೇ ನಿಜವಾದ ಧರ್ಮವಾಗಿದೆ ಎಂದು ಹೇಳಿದ ಬಸವತತ್ತ್ವವು ಇಂದಿಗೂ. ಪ್ರಸ್ತುತವಾಗಿದೆ. ಧರ್ಮದ ಆಧಾರದ ಮೇಲೆ ಬೆಳೆಸಿಕೊಳ್ಳದೆ ಇರುವ ಪಾಶ್ಚಿಮಾತ್ಯ ಜೀವನವನ್ನೇ ನೋಡೋಣ. ವಿಷಯ ಲೋಲುಪತೆ, ಅನಿರ್ಭಂದಿತ ಜೀವನದಿಂದ ಅವರು ಜೀವನದಲ್ಲಿರಬೇಕಾದ ನಿಜಶಾಂತಿಯನ್ನೇ ಕಳೆದುಕೊಂಡು, ಭಾರತದ ಆಧ್ಯಾತ್ಮ ತತ್ವಗಳ ಕಡೆಗೆ ಹೊರಳಿದ್ದಾರೆ. ತನ್ನನ್ನೇ ಗೆಲ್ಲಲಾರದವನು ಇಡೀ ಬ್ರಹ್ಮಾಂಡವನ್ನೇ ಗೆಲ್ಲಲು ಹೊರಟಿದ್ದಾನೆ. ಆದರೆ ಇಂದು ಭಾರತವು ಎತ್ತ ಸಾಗಿದೆ? ಇದನ್ನು ಯೋಚಿಸಿದಾಗ ಭವಿಷ್ಯವು ಭೀಕರವಾಗಿ ಕಾಣುತ್ತಿದೆ. ಸ್ವಾತಂತ್ರ್ಯ ನಂತರದ ಜೀವನವು ಸಾರ್ವತ್ರಿಕವಾಗಿ ಹದಗೆಟ್ಟಿದೆ. ರಾಜಕಾರಣಿಗಳು ಭ್ರಷ್ಟರಾಗಿದಾರೆ. ನಾವೂ ಇದರಿಂದ ಹೊರತಾಗಿಲ್ಲ. ಸರ್ಕಾರಿ ನೌಕರರಲ್ಲಿ ಹೆಚ್ಚುತ್ತಿರುವ ಲಂಚಗುಳಿತನವು ಜನಹಿತಕ್ಕಾಗಿ ಯೋಜಿಸಿರುವ ಎಲ್ಲ ಯೋಜನೆಗಳನ್ನೂ ನಿರರ್ಥಕಗೊಳಿಸಿದೆ. ಹಿಂದುಳಿದವರು, ಮುಂದೆ ಉಳಿದವರು ಎಂದು ಸರ್ಕಾರದವರೇ ವರ್ಗ ಕಲಹವನ್ನು ಬಿತ್ತುತ್ತಿದ್ದಾರೆ.

ನಮ್ಮ "ಬೇಕು"ಗಳನ್ನು ಬೆಳಸಿಕೊಂಡಾಗ, ನಾವು ಭ್ರಷ್ಟಾಚಾರಿಗಳಾಗುತ್ತೇವೆ. ವಿಜ್ಞಾನವು ನಮ್ಮನ್ನು ಇಂಜಿನೀಯರ್ ಮಾಡಬಹುದು. ಡಾಕ್ಟರನ್ನಾಗಿ ಮಾಡಬಹುದು. ಆದರೆ ಅದು ಜನರೊಡನೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಕಲಿಸುವುದಿಲ್ಲ. ಜನರೊಡನೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಧರ್ಮ ಕಲಿಸುತ್ತದೆ. ನಾವು ಎಷ್ಟು ಸ್ವಾರ್ಥಿಗಳಿದ್ದೇವೆಂದರೆ ಮಾನವರಿಗೆ ಮಾತ್ರ ಪ್ರಪಂಚ ಮೀಸಲಾಗಿದೆ ಎಂದು



ತಿಳಿದಿದ್ದೇವೆ. ಪರಿಸರ ಇಂದು ತೀರಾಹಾಳಾಗಿದೆ. ಇಂದು ಅರಣ್ಯವೇ ನಾಶವಾಗಿ, ವನ್ಯ ಪ್ರಾಣಿಗಳಾದ ಹುಲಿ-ಸಿಂಹಗಳು ಮಾಯವಾಗುತ್ತಿವೆ. ಅವುಗಳ ಸಂತತಿಯನ್ನು ಕಾಪಾಡಲು ಪ್ರಾಣಿ ಸಂಗ್ರಹಾಲಯವನ್ನು ನಿರ್ಮಿಸಬೇಕಾಗಿದೆ. ಜಗದ ಹಸಿವನ್ನು ತಣಿಸಲು, ಹೆನ್ರಿಬೋರ್ಲಾಂಗ್ ಹಸಿರು ಕ್ರಾಂತಿಯನ್ನುಂಟುಮಾಡಿ ನೊಬೆಲ್ ಪಾರಿತೋಷಕವನ್ನು ಗಿಟ್ಟಿಸಿದ. ಇದರಿಂದ ನಾವು ಆಹಾರದ ಉತ್ಪಾದನೆಯಲ್ಲಿ ಯಶಸ್ವಿಯಾಗಿರುವುದು ನಿಜ. ಹೆಚ್ಚು ಇಳುವರಿ ಪಡೆಯಲು, ನಾವು ರಸಗೊಬ್ಬರವನ್ನು ಯತೇಚ್ಛವಾಗಿ ಬಳಸುತ್ತಿದ್ದೇವೆ. ರಸಗೊಬ್ಬರದ ಬಳಕೆಯಿಂದ, ನೆಲದ ಫಲವತ್ತಾದ ಮೇಲ್ಪದರ ನಾಶವಾಗಿದೆ. ಪ್ರಕೃತಿಯು ಇಂದು ವಿಕೃತಿಯಾಗಿದೆ. ಅದರ ಸಮತೋಲನ ನಾಶವಾಗಿ, ಕೀಟಗಳು ಪೈರುಗಳನ್ನು ನಾಶಮಾಡುತ್ತಿವೆ. ಕೀಟನಾಶಕಗಳನ್ನು ಬೇಕಾಬಿಟ್ಟಿಯಾಗಿ ಉಪಯೋಗಿಸುತ್ತಿರುವುದರಿಂದ ಇಂದು ಜಲ, ನೆಲ, ಆಹಾರ ವಿಷಪೂರಿತವಾಗಿವೆ. ಇದರಿಂದ ನಾವು ವಿಶ ಮಿಶ್ರಿತವಾದ ಆಹಾರವನ್ನು ತಿಂದು ಬದುಕಬೇಕಾಗಿದೆ. ಪ್ರತಿ ನಿತ್ಯ ಬಳಸುವ ತರಕಾರಿ, ಹಣ್ಣುಗಳು ಸಹ ಕೆಟ್ಟಿವೆ. ಭೂಮಿಯನ್ನು ನಮ್ಮ ಪೂರ್ವಿಕರು ತಾಯಿ ಎಂದು ಕರೆದರು. ಭೂಮಿ ತಾಯಿ, ನಿನ್ನನ್ನು ನಾವು ದಿನವೂ ತುಳಿಯುತ್ತಿದ್ದೇವೆ. ಕ್ಷಮಿಸು ಎಂದು ಮಂತ್ರ ಪೂರಿತವಾಗಿ ಪ್ರಾರ್ಥಿಸುವ ನಾವು ನೆಲವನ್ನು ಹಾಳುಮಾಡಿದ್ದೇವೆ. ಇನ್ನು ಅಂತರಿಕ್ಷದ ಕತೆಯೂ ಹಾಗೆಯೇ ಆಗಿದೆ. ನಿರಂತರವಾಗಿ ಹೊಗೆ ಉಗುಳುವ ಲಾರಿ ಬಸ್ಸು ಕಾರುಗಳ ವಾಹನ ಸಂಚಾರದಿಂದ. ಅಂತರಿಕ್ಷದ ಓಜನ್ ಪದರವು ತೆಳುವಾಗಿ, ಅಲ್ಲಲ್ಲಿ ತೂತು ಬಿದ್ದಿದೆ. ಈ ವಾಹನಗಳು ನಾವು ಸ್ಥಾಪಿಸಿರುವ ಕಾರ್ಖಾನೆಗಳು ಉಗುಳುವ ಹೊಗೆಯನ್ನು ಸೇವಿಸುವ ನಾವು ಶ್ವಾಸಕೋಶದ ರೋಗಗಳಿಂದ ನರಳುತ್ತಿದ್ದೇವೆ. ಶಬ್ದ ಮಾಲಿನ್ಯ, ವಾಯು ಮಾಲಿನ್ಯ ಜಲ ಮಾಲಿನ್ಯದಿಂದ ಭೂಮಿಯ ಬಾಳು ನರಕ ಸದೃಶವಾಗಿದೆ. ಬಾಳು ಅಸಹನೀಯವಾಗಿದೆ. ಪರಿಸರವಾದಿಗಳು, ಜಗತ್ತಿನ ಉಳಿವಿನ ಬಗ್ಗೆ ಆತಂಕ ಗೊಂಡಿದ್ದಾರೆ. ವಿಜ್ಞಾನದ ಮುನ್ನಡೆಯನ್ನು ಜನತೆಯ ಒಳಿತಿಗಾಗಿ ಹೇಗೆ ಬಳಸಬೇಕೆಂಬುದನ್ನು ನಾವು ವಿವೇಚಿಸಬೇಕಾಗಿದೆ. ಶಿಕ್ಷಣದಲ್ಲಿ ವಿಜ್ಞಾನದ ಜೊತೆಗೆ, ಮಾನವ ಧರ್ಮದ ಪಾಠಗಳನ್ನು ಕಲಿಸಬೇಕು. ಶ್ರೀ ರಾಮಕೃಷ್ಣ ಪರಮಹಂಸ, ವಿವೇಕಾನಂದ, ಬಸವಣ್ಣನವರು ಬೋಧಿಸಿದ ವಿಶ್ವಮಾನವ ಧರ್ಮವನ್ನು ವಿದ್ಯಾರ್ಥಿಗಳಿಗೆ ಬೋಧಿಸಬೇಕು.

ಅಖಿಲ ಭಾರತ 62ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಶ್ರೀ ಸಿಂಪಿಲಿಂಗಣ್ಣನವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಸ್ವಾತಂತ್ರ್ಯ ಸಾಧನೆಯ ನಂತರ ನಮ್ಮ ಸರ್ಕಾರವು ದೊಡ್ಡ-ದೊಡ್ಡ ಅಣೆಕಟ್ಟುಗಳನ್ನು, ಭಾರಿ.ಭಾರಿ ಕೈಗಾರಿಕೆಗಳನ್ನು ಕಟ್ಟ ಹೊರಟಿತೇ ವಿನಹಃ ನಿಜವಾದ ಮನುಷ್ಯರನ್ನು ನಿರ್ಮಿಸಲಿಲ್ಲವೆಂದು ಹೇಳಿರುವುದು ನಾವು ಗಮನಿಸಬೇಕು. ವಿಜ್ಞಾನದಿಂದ ಮಾತ್ರ ಮಾನವ ತನ್ನ ಪರಿಪೂರ್ಣತೆಯನ್ನು ಸಾಧಿಸಲು ಸಾಧ್ಯವಿಲ್ಲ. ವಿಜ್ಞಾನ ಮತ್ತು ಆಧ್ಯಾತ್ಮಿಕತೆಯ ಸಂಮಿಲನದಿಂದ ಮಾತ್ರ

ಜಗತ್ತಿನ ಉದ್ಧಾರವಾಗುತ್ತದೆ. ಇದರ ಬಗ್ಗೆ ಸಿ.ಎಸ್.ಐ.ಆರ್.ನ ನಿವೃತ್ತ ಖ್ಯಾತ ವಿಜ್ಞಾನಿ ಡಾ॥ ಎಸ್. ಆರ್. ರಾವ್ ಶಿವಮೊಗ್ಗಿಯ ರೊಟೇರಿಯನ್ ರನ್ನು ಕುರಿತು ಇತ್ತೀಚಿಗೆ ಭಾಷಣ ಮಾಡುವ ಸಂದರ್ಭದಲ್ಲಿ, ಆಧ್ಯಾತ್ಮಿಕೆಯ ಬಗ್ಗೆ ತಿಳುವಳಿಕೆ ಕೊಡುವುದು ಮತ್ತು ಸಮಾಜ ಸುಧಾರಣೆಯಲ್ಲಿ ತಮ್ಮನ್ನು ತಾವೇ ತೊಡಗಿಸಿ ಕೊಳ್ಳುವುದು ಅಗತ್ಯ. ನೈತಿಕ ಸಂತೋಷವೆಂಬುದು ಕೇವಲ ಬೌದ್ಧಿಕತೆಯಿಂದ ದೊರೆಯದೆ, ಆಧ್ಯಾತ್ಮಿಕ ಸಂಮಿಲನದಿಂದ ದೊರೆಯುತ್ತದೆ ಎಂದು ಹೇಳಿರುವುದು ಮೇಲಿನ ಅಭಿಪ್ರಾಯಕ್ಕೆ ಒತ್ತು ಕೊಡುತ್ತದೆ. ನೀತಿವಂತ ಸಮಾಜವನ್ನು ರೂಪಿಸುವುದು ಮಠಾಧೀಶರ ಕೈಯಲ್ಲಿದೆ. ವಿಜ್ಞಾನವನ್ನು ಹೇಗೆ ಸದುಪಯೋಗ ಗೊಳಿಸಬೇಕೆಂದು ಧರ್ಮ ಪ್ರಚಾರಕರು ಬೋಧಿಸಬೇಕು. ಇಂದು ಗಾಂಧಿಯುಗದ ಸಮಾಜ ಪ್ರಚಾರಕರು ಮಾಯವಾಗಿದ್ದಾರೆ. ಈದಿಸೆಯಲ್ಲಿ ವೀರಶೈವ ಮಠಾಧೀಶರು ಆಧುನಿಕ ಶಿಕ್ಷಣದೊಂದಿಗೆ ಧಾರ್ಮಿಕ ಶಿಕ್ಷಣಗಳನ್ನು ಬಹುಮುಖವಾಗಿ ವ್ಯವಸ್ಥೆ ಮಾಡಿರುವುದು ಶ್ಲಾಘನೀಯವಾಗಿದೆ. ಗುರುಸ್ಥಾನದಲ್ಲಿರುವ ಈ ಮಠಾಧೀಶರ ಬೋಧನೆಯನ್ನು ನಾವು ಅನುಸರಿಸಿದರೆ, ನಮ್ಮ ಸಮಾಜವು ಬಂಗಾರವಾಗುವುದು. ರಾಷ್ಟ್ರ ಕವಿ ಕುವೆಂಪು ಹೇಳುವಂತೆ ನಾವು ವಿಶ್ವಮಾನವರಾಗಬೇಕು.





# ಆರೋಗ್ಯಕ್ಕೆ " ಧ್ಯಾನ "


ಹೆಚ್. ಎಂ. ಕೋಳಿವಾಡ, ಕಲ್ಯಾಣನಗರ, 6 ನೇ ಕ್ರಾಸ್, ಧಾರವಾಡ.


ಧ್ಯಾನ ಎಂದೊಡನೆ ನಮ್ಮ ಕಣ್ಣೆದುರು ಬಂದು ನಿಲ್ಲುವ ಚಿತ್ರ ಎಂದರೆ ನಿಬಿಡವಾದ ಅರಣ್ಯದಲ್ಲಿ ಅಥವಾ ದುರ್ಗಮವಾದ ಪರ್ವತಗಳ ಗುಹೆಗಳಲ್ಲಿಯ ಏಕಾಂತತೆಯಲ್ಲಿ ದೇಹ ದಂಡಿಸಿ ಮನಸ್ಸನ್ನು ನಿಗ್ರಹಿಸಿ ಕಣ್ಣು ಮುಚ್ಚಿ ಕುಳಿತ ಜಟಾಧಾರಿ ತಪಸ್ವಿಗಳದ್ದು. ದೇಹ ದಂಡನೆಯ ವಿನಃ ಮನೋನಿಗ್ರಹವಾಗದು, ಮನಸ್ಸನ್ನು ನಿಗ್ರಹಿಸದೆ ಧ್ಯಾನ ಸಾಧ್ಯವಾಗದು ಎಂಬುದು ನಮ್ಮ ಸಾಮಾನ್ಯ ತಿಳುವಳಿಕೆ. ಕಾರಣ ಆರೋಗ್ಯಕ್ಕೂ ಧ್ಯಾನಕ್ಕೂ ಯಾವ ನಂಟು ಎಂಬುದು ಸಹಜವಾದ ಪ್ರಶ್ನೆ.

ಪ್ರಾಚೀನ ಕಾಲದಿಂದಲೂ ಮನುಷ್ಯ ಧ್ಯಾನದಲ್ಲಿ ಆಸಕ್ತನಾಗಿದ್ದಾನೆ. ಪೌರ್ವಾತ್ಯರಲ್ಲಿ ಇದು ಅನವಶ್ಯಕವಾದ ವಿಚಾರಗಳಿಂದ ಮನಸ್ಸನ್ನು ಮುಕ್ತಗೊಳಿಸಿ ಬೌದ್ಧಿಕ ತೀಕ್ಷ್ಣತೆಯನ್ನು ಪಡೆಯುವ ಸಾಧನವಾದರೆ ಪಾಶ್ಚಿಮಾತ್ಯರಲ್ಲಿ ಪ್ರಾರ್ಥನೆಯ ಮೂಲಕ ಸ್ವಾರ್ಪಣೆಯ ರೂಪದಲ್ಲಿ ಕಂಡುಬರುತ್ತದೆ. ಇತ್ತೀಚೆಗೆ ಧ್ಯಾನದ ಬಗ್ಗೆ ನಮ್ಮ ಉತ್ಸುಕತೆ ಹೆಚ್ಚು ಹೆಚ್ಚಾಗಿ ಬೆಳೆದು ಬಂದಿದೆ. ದಿನ ನಿತ್ಯದ ನಮ್ಮ ಸಾಂಸಾರಿಕ ಸಮರದಲ್ಲಿ ಏಕಾಗ್ರತೆಯನ್ನು ಸಾಧಿಸಲು ಮತ್ತು ಮಾನಸಿಕ ಶಾಂತಿಯನ್ನು ಸ್ಥಿರವಾಗಿರಿಸಿಕೊಳ್ಳಲು ನಾವು ಧ್ಯಾನಕ್ಕೆ ಶರಣು ಹೋಗುತ್ತಿದ್ದೇವೆ. ಈ ಕಾರಣವಾಗಿ ಅನೇಕ ಸಾಂಪ್ರದಾಯಗಳು ಮೊಳೆತು ಕೊಂಡಿವೆ. ಹೊಸ ಹೊಸ ಗುರು ಪೀಠಗಳ ನಿರ್ಮಾಣವಾಗಿವೆ. ಆಧುನಿಕ ವಿಜ್ಞಾನವನ್ನು ಅಳವಡಿಸಿಕೊಂಡು ನಿತ್ಯ ನೂತನ ಪ್ರಯೋಗಗಳು ಕೂಡ ನಡೆದಿವೆ.

ಬಯಲೊಳಗೆ ಆಲಯವೂ ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ ಬುದ್ಧಿ ನಯನ ದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ?
ಎಂಬುದೊಂದು ಕನಕ ದಾಸರ ಪದ.

ಪಾಶ್ಚಿಮಾತ್ಯ ವೈಜ್ಞಾನಿಕರು ಸಮಸ್ತ ಸೃಷ್ಟಿಯನ್ನು ಸಮಯ (Time) ಆಕಾಶ (space) ವಸ್ತು (matter) ಮತ್ತು ಶಕ್ತಿ (energy) ಎಂದು ನಾಲ್ಕು ವಿಭಾಜನೆಗಳಲ್ಲಿ ವಿಂಗಡಿಸಿ ಈ ವಿಭಾಜನೆಗಳಿಗೆ ಅಂತಃ ಸಂಬಂಧವಿಲ್ಲ ಎಂದು ಪ್ರತಿಪಾದಿಸಿದರು. ಆದರೆ ಮುಂದೆ ಡಾ॥ ಐನ್‌ಸ್ಟೀನ್ ಸಾಪೇಕ್ಷತ್ವ ತತ್ವಮಂಡಿಸಿ,

ವಸ್ತುವಿನಲ್ಲಿ ಶಕ್ತಿ ಅಡಗಿದೆ, ವಸ್ತುವನ್ನು ಶಕ್ತಿಯನ್ನಾಗಿ ರೂಪಾಂತರ ಗೊಳಿಸಬಹುದು ಎಂಬುದನ್ನು ಸಿದ್ಧಪಡಿಸಿದ, ಇದರಿಂದಾಗಿ ವಿಭಾಜನೆಯ ಕಲ್ಪನೆ ಕುಸಿಯಿತು. ಇದಕ್ಕೂ ಮುಂದೆ ಸಾಗಿ ಸಮಯ, ಆಕಾಶ, ವಸ್ತು ಮತ್ತು ಶಕ್ತಿ ಈ ನಾಲ್ಕು ವಿಭಾಜನೆಗಳ ಹಿಂದೆ ಒಂದು ಐಕ್ಯತೆಯ (unified field) ವಲಯ ಬಂದಿದೆ ಎಂಬುದನ್ನು ಮನಗಂಡು, ಅದನ್ನು ಗಣಿತದ ಸೂತ್ರದಲ್ಲಿ ಸೆರೆಹಿಡಿದಿಡಲು ಡಾ|| ಐನ್‌ಸ್ಟೀನ್ ತನ್ನ ಶೇಷ ಆಯುಷ್ಯದಾದ್ಯಂತ ಪ್ರಯತ್ನಿಸಿದ.

ವಸ್ತು ಶಕ್ತಿಯ ಜಡ (coarse) ರೂಪ. ಅಥವಾ ತಡೆಗಟ್ಟಲ್ಪಟ್ಟ ಶಕ್ತಿಯರೂಪ. ಶಕ್ತಿಯರೂಪ ಸೂಕ್ಷ್ಮ (finer) ವಾದದ್ದು. ಪ್ರಪಂಚವನ್ನೆಲ್ಲ ಶಕ್ತಿ ಆವರಿಸಿದೆ. ಅದು ಜಡರೂಪದಲ್ಲಿ ಇರಬಹುದು ಅಥವಾ ಸೂಕ್ಷ್ಮ ರೂಪದಲ್ಲಿ ಇರಬಹುದು. ವಸ್ತುವನ್ನು ಶಕ್ತಿಯನ್ನಾಗಿ, ಶಕ್ತಿಯನ್ನು ವಸ್ತುವನ್ನಾಗಿ ರೂಪಾಂತರಗೊಳಿಸಬಹುದಾದ್ದರಿಂದ, ಜಡವಿದ್ದಲ್ಲಿ ಸೂಕ್ಷ್ಮವೂ ಇದೆ ಸೂಕ್ಷ್ಮ ವಿದ್ದಲ್ಲಿ ಜಡವೂ ಇದೆ. ಶಕ್ತಿಯ ರೂಪ. ಕಂಪನಮಯ ಕಾರಣ ಬ್ರಹ್ಮಾಂಡವೆಲ್ಲ ಕಂಪನಗಳಿಂದ ಮುಸುಕಿದೆ. ನಾವು ಕೂಡ ಸೃಷ್ಟಿಯ ತತ್ವಗಳಿಂದಲೇ ಉದ್ಭವಿಸಿದವರಾದ್ದರಿಂದ, ಕಂಪನಮಯವಾಗಿದ್ದೇವೆ. ಅಂತೆಯೆ ನಾವು ಅಖಂಡದ ಅಂಶವೂ ಆಗಿದ್ದೇವೆ, ಅಖಂಡವೂ ಆಗಿದ್ದೇವೆ. ಇದನ್ನೆ ನಮ್ಮ ದಾರ್ಶನಿಕರು ಸಾರಿಲ್ಲವೆ ? ಕನಕದಾಸರ ಪದದಲ್ಲಿ ಅಡಗಿದ ಸತ್ಯ ಇದೇ ಅಲ್ಲವೆ ? ಐನ್‌ಸ್ಟೀನ್ ಮನಗಂಡ (unification of fields ಇದೇ ಅಲ್ಲವೆ ?

ಸೃಷ್ಟಿಯನ್ನು ಅರಿತುಕೊಳ್ಳಲು ಎರಡು ದಾರಿಗಳುಂಟು. ಒಂದು ನಮ್ಮ ಇಂದ್ರಿಯಗಳ ಸಹಾಯದಿಂದ (Subjective) ಮತ್ತೊಂದು ನಮ್ಮ ಪ್ರಜ್ಞೆಯಿಂದ ಮನೋಗ್ರಾಹ್ಯ ಶಕ್ತಿಯಿಂದ. (Subjective) ನಮ್ಮ ದಾರ್ಶನಿಕರು ಸಮಸ್ತ ಬ್ರಹ್ಮಾಂಡವನ್ನು ನೋಡಿದ್ದು, ಅರಿತಿದ್ದು ಈ ಮನೋಗ್ರಾಹ್ಯ ಶಕ್ತಿಯಿಂದ, ಅಂತಃಚಕ್ಷುವಿನಿಂದ. ಕನಕದಾಸರ ಪದದಲ್ಲಿ ಅಡಗಿದ ಸತ್ಯವನ್ನು ಬಾಹ್ಯ ಇಂದ್ರಿಯಗಳಿಂದ ಅರಿಯುವಷ್ಟು ಆಧುನಿಕ ವಿಜ್ಞಾನದ ಪ್ರಗತಿಯಾಗಿಲ್ಲ. ಅದು ವಿಜ್ಞಾನದ ಆಚೆಗಿನದು. ಈ ಐಕ್ಯ ಭಾವವನ್ನು ಅರಿಯಲು ಅಂತಃಪ್ರಜ್ಞೆ, ಅಂತಃಚಕ್ಷು ಬೇಕು. ಹಾಗೆಂದು ನಮ್ಮ ಪೂರ್ವಜರಿಗೆ ವಾಸ್ತವವಾದ (Objective) ಜ್ಞಾನ ಇರಲಿಲ್ಲ ಎನ್ನಲಾಗದು. ಅವರು ನಮಗೆ ಸಸ್ಯಶಾಸ್ತ್ರ, ಖಗೋಳಶಾಸ್ತ್ರ, ಗಣಿತಶಾಸ್ತ್ರ, ಶರೀರಶಾಸ್ತ್ರ, ಔಷಧಿಶಾಸ್ತ್ರ, ರಸಾಯನಶಾಸ್ತ್ರ ಮುಂತಾದ ವಿಜ್ಞಾನಗಳನ್ನು ನೀಡಿದ್ದಾರೆ. ನಿಸರ್ಗದ ಮಡಿಲಲ್ಲಿ ಆಳವಾಗಿ ಅಡಗಿದ ಸತ್ಯವನ್ನು ಅರಿಯಲು ಬರೀ (Objectivity) ಸಾಲದು ಎಂದು ಅವರ ಅಭಿಪ್ರಾಯ.



ಯಾವುದೇ ಸಮಯದಲ್ಲಿ ಮನುಷ್ಯ ಜಾಗ್ರತಾವಸ್ಥೆ, ನಿದ್ರಾವಸ್ಥೆ ಮತ್ತು ಸ್ವಪ್ನಾವಸ್ಥೆಗಳಲ್ಲಿಯ ಒಂದು ಅವಸ್ಥೆಯಲ್ಲಿರುತ್ತಾನೆ. ಈ ಮೂರೂ ಅವಸ್ಥೆಗಳ ಸಂಯೋಜಿಸುವ ನಾಲ್ಕನೇಯ ಒಂದು ಅವಸ್ಥೆ ಇದೆ. ಅದು ಅರಿವಿನ ( awareness) ಅವಸ್ಥೆ ಎಂಬುದನ್ನು ನಮ್ಮ ವೈಚಾರಿಕರು ಮನೋಗ್ರಾಹ್ಯವಾಗಿ ಕಂಡುಕೊಂಡರು. ಈ ನಾಲ್ಕನೇಯ ಅವಸ್ಥೆ ಬರಿ ಒಂದು ಪರಿಕಲ್ಪನೆಯಲ್ಲಿ ಅಥವಾ ಗಣಿತದ ಸೂತ್ರವೂ ಅಲ್ಲ. ಅದೊಂದು ದಿವ್ಯ ಅನುಭವ. ಇದನ್ನು ಅರಿಯಲು ಯೋಗಾಭ್ಯಾಸ (Discipline) ಬೇಕು ಮತ್ತು ಧ್ಯಾನ ಎಂಬ ತಂತ್ರ (technique) ದ ಸಹಾಯಬೇಕು ಎಂದು ಮೊಟ್ಟ ಮೊದಲು ಪತಂಜಲಿ ಅಭಿಪ್ರಾಯ ಪಟ್ಟಿದ್ದಾನೆ.

ನಾಯಿಯ ಮರಿ ಜನಿಸಿದಾಗ ಅದು ಕಣ್ಣುಮುಚ್ಚಿಕೊಂಡಿರುತ್ತದೆ. ಅದರ ದೃಶ್ಯವಾಹಕ ನರಗಳು ಇನ್ನೂ ಅವಿಕಸಿತವಾಗಿರುವದರಿಂದ ಅದಕ್ಕೆ ನೋಟದ ಶಕ್ತಿ ಇರುವುದಿಲ್ಲ, ಮುಂದೆ ಕೆಲದಿನಗಳ ನಂತರ ಈ ನರಗಳು ವಿಕಾಸಗೊಂಡು ನೋಟದ ಶಕ್ತಿ ಬಂದೊಡನೆ ಅದು ಕಣ್ಣು ತೆರೆಯುತ್ತದೆ. ಈ ಸಮಯದಲ್ಲಿ ಅದರ ಕಣ್ಣು ಕಟ್ಟಿ ಮುಚ್ಚಿಬಿಟ್ಟರೆ, ಜನ್ಮದಾದ್ಯಂತಅದು ಕುರುಡಾಗಿ ಬಾಳಬೇಕಾಗುತ್ತದೆ. ಅದರ ಮೆದುಳು ದೃಶ್ಯದ ಪ್ರತಿಬಿಂಬಗಳನ್ನು ತನ್ನಲ್ಲಿ ಮೂಡಿಸಿಕೊಳ್ಳಲು ಶಕ್ತವಾಗಿದ್ದರೂ, ವಾಸ್ತವ ಅನುಭವ, ವಾಸ್ತವ ಜ್ಞಾನ ಅದಕ್ಕೆ ದೊರೆಯದೇ ಹೋದುದಕ್ಕೆ ಅದು ಕುರುಡಾಗುತ್ತದೆ. ನಾವೆಲ್ಲ ಒಂದೊಂದು ರೇಡಿಯೊ ಪೆಟ್ಟಿಗೆಗಳಿದ್ದಂತೆ. ಜಾಗೃತ, ನಿದ್ರೆ ಹಾಗೂ ಸ್ವಪ್ನದ ಈ ತ್ರೈತಾವಸ್ಥೆಗಳ ಚೆನೆಲಗೆ (Channel) ನಮ್ಮನ್ನು ನೆಂಟಿಸಿಕೊಂಡಿದ್ದೇವೆ. ಈ ಮೂರೂ ಅವಸ್ಥೆಗಳ ಆಚೆಗಿರುವ ಅರಿವಿನ ನಾಲ್ಕನೇಯ ಅವಸ್ಥೆಗೆ ನೆಂಟಿಸಿಕೊಳ್ಳುವ ಯೋಗ್ಯತೆ ಇದ್ದರೂ, ಜ್ಞಾನದ ಅಭಾವದಿಂದಾಗಿ ನಾವು ಅದಕ್ಕೆಹೊರತಾಗಿದ್ದೇವೆ ಕುರುಡರಾಗಿದ್ದೇವೆ.

ನಮ್ಮ ಮನದಲ್ಲಿ ಸದಾ ಕೋಲಾಹಲಗೈಯುತ್ತಿರುವ ವಿಚಾರಗಳ ಸ್ವರೂಪ ಕೂಡ ಕಂಪನಮಯವಾಗಿದೆ, ಮತ್ತು ಈ ಕಂಪನಗಳು ಶಬ್ದಕ್ಕಿಂತ ಹೆಚ್ಚಿನ ವೇಗ ಪಡೆದಿವೆ ಎಂಬುದು ವೈಜ್ಞಾನಿಕ ಸತ್ಯ. ಈ ಕಂಪನಗಳು ಸಜೀವವಾಗಿವೆ ಅಷ್ಟೇ ಅಲ್ಲ ಇವು ಚಿರಂಜೀವಿಗಳು ಕೂಡ. ಇಂಥ ಕಂಪನಗಳಿಂದ ನಾವು ಸದಾಕಾಲ ಆವರಿಸಲ್ಪಟ್ಟಿದ್ದೇವೆ. ನಮ್ಮ ಕಾಮ, ಕ್ರೋಧ, ಮದ, ಮತ್ಸರ, ಕ್ರೌರ್ಯ ಮುಂತಾದ ವಿಕಾಸಾತ್ಮಕ ಭಾವನೆಗಳಿಂದ ಹೊರಡುವ ಕಂಪನಗಳು ನಮ್ಮ ಶರೀರದಲ್ಲಿ ಡಾ|| ಹನಿಮನ್ ಹೇಳುವ ಮಿಯಾಸಂಸ್ (Miasms) ನ್ನು ನಿರ್ಮಿಸಿ ರೋಗಗಳಿಗೆ ಔತಣ ನೀಡುತ್ತವೆ.

ಜಪಾನಿನ ಸುತ್ತಮುತ್ತ ಹರಡಿರುವ ಸಣ್ಣ ಸಣ್ಣ ಮಂಜುಗಡ್ಡೆಗಳಲ್ಲಿ ನಿಜನವಾದ ಮತ್ತು ಒಂದಕ್ಕೊಂದು ಸಾಕಷ್ಟು ದೂರವಿರುವ ಎರಡು ನಡುಗಡ್ಡೆಗಳನ್ನು ಒಂದು ಪ್ರಯೋಗಕ್ಕಾಗಿ ಆಯ್ದುಕೊಂಡರು. ಹೀಗೆ ಆರಿಸಿಕೊಂಡ ಎರಡೂ ನಡುಗಡ್ಡೆಗಳಲ್ಲಿ ಮಂಗಗಳ ಸಂಖ್ಯೆ ಅಧಿಕವಾಗಿತ್ತು, ಒಂದು ನಡುಗಡ್ಡೆಯ ಮಂಗಗಳು ಎರಡನೇಯ ನಡುಗಡ್ಡೆಗೆ ಸುಲಭವಾಗಿ ಹೋಗುವ ಹಾಗಿರದಿದ್ದರೂ ಹಾಗೆ ಹೋಗದಂತೆ ಎಚ್ಚರವಹಿಸಲಾಯಿತು. ಆನಂತರ ಒಂದು ನಡುಗಡ್ಡೆಯ ಮಂಗಗಳಿಗೆ ತಿನ್ನಲು ಬಟಾಟೆಯನ್ನು ಕೊಡಲಾಯಿತು. ಮುಂದೆ ಅವುಗಳಿಗೆ ಹೀಗೆ ತಿನ್ನಲು ಕೊಟ್ಟ ಬಟಾಟೆಗಳನ್ನು ತೊಳೆದುಕೊಂಡು ತಿನ್ನಲು ಕಲಿಸಲಾಯಿತು. ನಂತರ ಎರಡನೆಯ ನಡುಗಡ್ಡೆಯಲ್ಲಿಯ ಮಂಗಗಳಿಗೆ ತಿನ್ನಲು ಪ್ರಥಮ ಬಾರಿ ಬಟಾಟೆಯನ್ನು ಕೊಡಲಾದಾಗ ಅವುಗಳು ಬಟಾಟೆಯನ್ನು ತೊಳೆದು ತಿನ್ನಲಾರಂಭಿಸಿದವು. ಹೀಗೆ ವಿಚಾರಗಳು ಒಂದು ಸ್ಥಾನದಿಂದ ಮತ್ತೊಂದು ಸ್ಥಾನಕ್ಕೆ ಪ್ರಸಾರಗೊಳ್ಳುತ್ತವೆ. ಈ ಕಾರಣಕ್ಕಾಗಿಯೇ ಸುದೂರದ ಸಮಕಾಲಿನ ಸಂಸ್ಕೃತಿಗಳಲ್ಲಿ ಸಮಾನಾಂತರ ವಿಚಾರಗಳನ್ನು, ರೀತಿ ರಿವಾಜುಗಳನ್ನು ಕಾಣುತ್ತೇವೆ. ಭೌತಿಕ ಸಂಪರ್ಕ ಮುಖ್ಯವಾದುದ್ದಲ್ಲ, ಅಧಿಕಾಂಶ ಜನರು ಫ್ಲೂದಿಂದ ಬಳಲಿದಾಗ ಫ್ಲೂದ ಗಾಳಿ ಬೀಸಿದೆ ಎಂದು ನಾವು ಸಹಜವಾಗಿ ಅನ್ನುವುದಿಲ್ಲವೆ? ಆದರಲ್ಲಿ ಸತ್ಯಾಂಶವಿದೆ. ಅಧಿಕ ಜನರು ಹೊರಗಣ ವಾತಾವರಣದಿಂದ ವಿನಾಶಾತ್ಮಕ ಕಂಪನಗಳನ್ನು ಸ್ವೀಕರಿಸಿದಾಗ ಇಂಥ ರೋಗಗಳು ಸಾಮೂಹಿಕವಾಗಿ ಪ್ರಸಾರಗೊಳ್ಳುವುದುಂಟು. ಮಳೆ ಬೇಕೆಂದು ಸಾಮೂಹಿಕವಾಗಿ ನಡೆಸುವ ಭಜನೆ ಯಜ್ಞ ಮುಂತಾದ ಕ್ರಿಯೆಗಳ ಹಿಂದೆ ಇದೇ ಭಾವನೆ ಇದೆ. ನಮ್ಮ ವಿಚಾರಗಳು ನಮ್ಮ ಮತ್ತು ಇತರರ ಮೇಲಲ್ಲದೆ ಸುತ್ತಣ ಪರಿಸರದ ಮೇಲೂ ಪ್ರಭಾವ ಬೀರಬಲ್ಲವಾಗಿವೆ.

ಆರೋಗ್ಯರಕ್ಷಣೆಗೆ ಧ್ಯಾನ ಹೇಗೆ ಪೂರಕ ಎಂಬುದನ್ನು ನಾನಿಲ್ಲಿ ಚಿಂತಿಸಲು ಪ್ರಯತ್ನಿಸಿದ್ದೇನೆ. ವಿನಃ ಧ್ಯಾನದ ಬಗ್ಗೆ ಹೊಸತೊಂದು ಮೀಮಾಂಶೆ (treatise) ಯನ್ನು ಸೃಜಿಸುತ್ತಿಲ್ಲ. ಸಾಮಾನ್ಯವಾಗಿ ಧ್ಯಾನವನ್ನು ಗುರುವಿನ ಸನ್ನಿಧಿಯಲ್ಲಿಯೇ ಅರಿತುಕೊಳ್ಳಬೇಕು ಎಂಬುದು ನಮ್ಮ ಸಾಂಪ್ರದಾಯಿಕ ಮತ. ಸದ್ಗುರುಗಳ ಅಭಾವದ ಈ ಕಾಲದಲ್ಲಿ "ನೀವೆ ಮಾಡಿ ನೋಡಿರಿ" (do it yourself) ರೀತಿಯಲ್ಲಿ ಧ್ಯಾನದ ಬಗೆಗೂ ಅನೇಕ ಹೊತ್ತಿಗೆಗಳು ಪ್ರಕಾಶಗೊಂಡಿವೆ. ಧ್ಯಾನವು ಒಂದು ಮಾನಸಿಕ ಪ್ರಕ್ರಿಯೇ, ಭೌತಿಕವಾದದ್ದಲ್ಲ. ಕಾರಣ ಧ್ಯಾನದ ಅನುಭವಗಳು ವೈಯಕ್ತಿಕವಾಗಿದೆ. ನನಗಾದ ಅನುಭವ ನಿಮಗೂ ಆಗಬೇಕೆಂದಿಲ್ಲ. ನಿಮ್ಮ ಅನುಭವ ನಿಮಗೆ ಹಾಗಾಗಿ ಈ ಪುಸ್ತಕಗಳು ಗೊಂದಲವನ್ನುಂಟುಮಾಡುತ್ತವೆ. ಇನ್ನಿಷ್ಟು ಗೊಂದಲವನ್ನು ನಾನು ಸೇರಿಸಲು ಆಶಿಪಡುವುದಿಲ್ಲ. ಆದರೆ ಧ್ಯಾನ ಎಂಬುದು



ಸಹಜವಾದುದು ಮತ್ತು ಅದು ಆರೋಗ್ಯ ರಕ್ಷಣೆ ಮಾಡಬಲ್ಲದು ಎಂಬುದನ್ನು ಮಾತ್ರ ಅರಿಕೆಮಾಡಿಕೊಳ್ಳುತ್ತಿದ್ದೇನೆ. ಇದನ್ನು ನೀವು ನಿಮ್ಮ ಅನುಭವದ ಒರೆಗಲ್ಲಿಗೆ ಹಚ್ಚಿ ನೋಡಿರೆಂಬುದು ನನ್ನ ವಿನರಿಕೆ.

ದೇಹಕ್ಕೂ ಮನಸ್ಸಿಗೂ ಸಂಬಂಧವಿದ್ದಂತೆ, ಉಸಿರಿಗೂ ಮನಸ್ಸಿಗೂ ನಿಕಟವಾದ ಬಾಂಧವ್ಯವಿದೆ. ಅಕ್ರಮವಾದ ಉಸಿರಾಟದಿಂದ ನಮ್ಮ ಮನಸ್ಸಿನಲ್ಲಿ ವಿಪರೀತ ಭಾವನೆಗಳು ಉಗಮಿಸುತ್ತವೆಂದು ಪ್ರಖ್ಯಾತ ಮನೋವಿಜ್ಞಾನಿ ದಿ|| ರಜನೀಶ ಹೇಳಿದ್ದಾರೆ. ಇದು ಸತ್ಯವಾದದ್ದು. ಸುಲಭವಾಗಿ ಪರೀಕ್ಷಿಸಿ ನೋಡಬಹುದು. ನಮ್ಮ ಉಸಿರಾಟವನ್ನು ನಿಯಂತ್ರಿಸಿ ಮನಸ್ಸನ್ನು ನಿಯಂತ್ರಿಸಲು ಸಾಧ್ಯವಿದೆ. ಅಂತೆಯೇ ಅನೇಕ ಪ್ರಕಾರದ ಪ್ರಾಣಾಯಾಮ ನಿರ್ಮಿತವಾಗಿದೆ. ನೀವುನಿಮ್ಮ ಲಕ್ಷ್ಯವನ್ನು ನಿಮ್ಮ ಉಸಿರಿನ ಮೇಲೆ ಕೇಂದ್ರಿಕರಿಸಿದಾಗ ಅನುಸರಿಸುವದು ಧ್ಯಾನ. ಧ್ಯಾನ ಎಂಬುದು ಒಂದು ಮಾನಸಿಕ ಪ್ರಕ್ರಿಯೆ. we cannot do it but it follows. ಧ್ಯಾನಕ್ಕೆ ಮನಶ್ಶಾಂತಿ ಬೇಕಿಲ್ಲ. ಧ್ಯಾನದಿಂದ ಮನಶ್ಶಾಂತಿ ದೊರೆಯುತ್ತದೆ. ದೇಹದಂಡನೆಯಿಂದ ಮನಸ್ಸು ನಿಯಂತ್ರಣಕ್ಕೊಳಗಾಗುವುದಿಲ್ಲ. ಧ್ಯಾನದಿಂದ ಅದು ಸಾಧ್ಯವಾಗುತ್ತದೆ. ಧ್ಯಾನ ನಮಗೆ ಸಹಜವಾದದ್ದು ಹಾಗು ಸುಲಭವಾದದ್ದು.

ಧ್ಯಾನದ ಅನೇಕ ವಿಧಾನಗಳಲ್ಲಿ, ಬೌದ್ಧಮತೀಯರು ಪ್ರತಿಪಾದಿಸಿದ ವಿಧಾನ ನನಗೆ ಅತ್ಯಂತ ಸರಳವಾಗಿ ತೋರಿದೆ. ಈ ವಿಧಾನದಲ್ಲಿ ನೀವು ನಿಮಗೆ ಸುಖವೆನಿಸುವ ರೀತಿಯಲ್ಲಿ ಆಸೀನರಾಗಿರಿ. ಬೆನ್ನೆಲುಬು ಸರಳರೇಖೆಯಲ್ಲಿರಲಿ. ಕಣ್ಣುಮುಚ್ಚಿ ನಿಮ್ಮ ಉಸಿರಾಟವನ್ನು ಗಮನಿಸಿರಿ. ನಿಮ್ಮ ಚಿತ್ತವನ್ನು ನಿಮ್ಮ ಉಸುರಿನಮೇಲೆ ಕೇಂದ್ರೀಕರಿಸಿರಿ. ನಿಮ್ಮ ಮನಸ್ಸಿನಲ್ಲಿ ಏಳುವ ವಿಚಾರಗಳನ್ನು ಪ್ರಯತ್ನ ಪೂರ್ವಕ ತಡೆಹಿಡಿಯಬೇಡಿ. ವಿಚಾರಗಳು ಮೂಡುತ್ತವೆ ನಶಿಸುತ್ತವೆ. ಅವು ಭೂತಕಾಲಕ್ಕೆ ಸಂಬಂಧಿಸಿರಬಹುದು ಅಥವಾ ಭವಿಷ್ಯಕ್ಕೆ ಅದನ್ನು ಗಮನಿಸಬೇಡಿ. ನೀವು ವರ್ತಮಾನವನ್ನು ಮಾತ್ರ ಗಮನಿಸಿರಿ. ನಿಮ್ಮ ಉಸಿರಾಟ ವರ್ತಮಾನದ್ದು. ಅದನ್ನು ಮಾತ್ರ ಗಮನಿಸಿರಿ. ಕ್ರಮೇಣ ನಿಮ್ಮ ಉಸಿರಾಟದಗತಿ ಮಂದ ಮಂದವಾಗುತ್ತದೆ. ಹಾಗೆಯೇ ನಿಮ್ಮ ವಿಚಾರಗಳು ಕೂಡ ಮಂದಗಾಗುತ್ತಾ ಹೊಗುತ್ತವೆ. ಏಕಚಿತ್ತದಿಂದ ನಿಮ್ಮ ಉಸಿರನ್ನೇ ಗಮನಿಸುತ್ತ ಹೋಗಿರಿ. ಬರುಬರುತ್ತ ನೀವು ತಟಸ್ಥರಾಗುತ್ತೀರಿ. ನಿರ್ಲಿಪ್ತರಾಗುತ್ತೀರಿ. ಆಗ ಒಂದು ಆಂತರಿಕ ಶಾಂತಿ, ಆಂತರಿಕ ಅರಿವು ಮೂಡುತ್ತದೆ. ನಿಮ್ಮನ್ನು ನೀವೇ ಕಂಡುಕೊಳ್ಳುತ್ತೀರಿ. ಇದೇ ಸ್ಥಿತಿಯನ್ನು ಬಹಳ ಸಮಯದವರೆಗೆ ಸತತಸಾಧನೆಯಿಂದ ಮುಂದುವರೆಸಲು ಸಾಧ್ಯವಿದೆ. ಆಗ ಸಮಾಧಿ ಪ್ರಾಪ್ತವಾಗುತ್ತದೆ. ನೀವು ಅದ್ವೈತರಾಗುತ್ತೀರಿ.

(ಮುಂದುವರಿಯುತ್ತದೆ)

" ಮಾಟಕೂಟ " ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ " ಮಾಡಿದೆ " ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು ! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ





# " ಲೇಸೆನಿಸಿಕೊಂಡು ಬದುಕುವ್ರೋ ಮಾನವಾ !"

ಎಂ. ಮಾಧವ ಪೈ, ಡಿ.ವಿ.ಎಸ್, ಪ್ರೌಢಶಾಲೆ ಸಮೀಪ, ವಿನೋಬನಗರ, ಶಿವಮೊಗ್ಗ-577201

" ಹಾವು, ಹದ್ದು, ಕಾಗೆ, ಗೂಗೆ ಅನಂತಕಾಲ ಬದುಕವೋ ?
ಬೇಡವೋ ಮಾನವಾ ।
ಲೇಸೆನಿಸಿಕೊಂಡು ಬದುಕುವೋ ಮಾನವ । "

ಎಂದು ವಿನಂತಿಸಿಕೊಂಡು ಮನುಷ್ಯತ್ವದ ಮಹತ್ತನ್ನು ತಿಳಿಸಿಕೊಟ್ಟಿದ್ದಾರೆ ಬಸವಣ್ಣನವರು. ಕಾರಣ ಮಾನವಜನ್ಮ ದೊರಕುವುದೇ ಒಂದು ಪುಣ್ಯವಿಶೇಷ. ಆದ್ದರಿಂದಲೇ ಪ್ರಾಚೀನಕಾಲದಿಂದಲೂ ಅದರ ಮಹತ್ವವನ್ನು ಸಾರುತ್ತಾ ಬಂದಿದ್ದಾರೆ. " ನರತ್ವಂ ದುರ್ಲಭಂ ಲೋಕೇ " -ಲೋಕದಲ್ಲಿ ಮನುಷ್ಯತ್ವ ಪ್ರಾಪ್ತವಾಗುವುದು ದುರ್ಲಭವೆಂದು ಹೇಳುತ್ತದೆ ವಿಷ್ಣುಪುರಾಣ. " ನಹಿ ಮಾನುಷಾತ್ ಶ್ರೇಷ್ಠತರಂ ಹಿಕಿಂಚಿತ್ ". -ಮನುಷ್ಯತ್ವಕ್ಕಿಂತ ಮಿಗಿಲಾದುದು. ಯಾವುದೂ ಇಲ್ಲ ಎಂದು ಸಾರಿದ್ದಾರೆ ಮಹರ್ಷಿ-ವ್ಯಾಸರು ಮಹಾಭಾರತದಲ್ಲಿ" ದುರ್ಲಭಂತ್ರಯಮೇವೈತತೆ ದೈವಾನುಗ್ರಹ ಹೇತುಕಂ। ಮನುಷ್ಯತ್ವಂ ಮುಮುಕ್ಷತ್ವಮಹಾಪುರುಷ ಸಂಶ್ರಯಃ॥ ಮನುಷ್ಯತ್ವ, ಮುಮುಕ್ಷತ್ವ ಹಾಗೂ ಮಹಾಪುರುಷರ ಸಂಸರ್ಗ. ಇವು ಮೂರು ದೈವಾನುಗ್ರಹದಿಂದಲ್ಲದೆ ಪ್ರಾಪ್ತವಾಗುವುದು ದುರ್ಲಭವೆಂದಿದ್ದಾರೆ ಶ್ರೀ ಶಂಕರಾಚಾರ್ಯರು. " ಮಾನವಜನ್ಮದೊಡ್ಡದು, ಇದು ಹಾಳುಮಾಡಿಕೊಳ್ಳಬೇಡಿ, ಹುಚ್ಚಪ್ಪಗಳಿರಾ। " ಎಂದು ಕೇಳಿಕೊಂಡಿದ್ದಾರೆ ದಾಸವರೇಣ್ಯಪುರಂದರದಾಸರು. ಎಲ್ಲ ಈ ಹೇಳಿಕೆಗಳು ಮಾನವಜನ್ಮದ ಹಿರಿಮೆಯನ್ನು ಮನುಷ್ಯತ್ವದ ಗರಿಮೆಯನ್ನು ಸಾರಿ ಹೇಳಿರುವ ವಿಷಯ ಸದಾ ಮನನೀಯವಾದುದಾಗಿವೆ.

ವಿಶ್ವದಲ್ಲಿ ಅಗಣಿತ ಜೀವಿಗಳಿವೆ ಈ ಜೀವಿಗಳಲ್ಲಿ ಮಾನವನೂ ಸೇರಿದ್ದಾನೆ. ಸಕಲ ಜೀವಿಗಳಿಗೂ ಆಹಾರ, ನಿದ್ರೆ, ಭಯ, ಮೈಥುನಗಳು ಸಾಮಾನ್ಯವಾದುದಾಗಿದ್ದರೂ, ಉಳಿದೆಲ್ಲ ಜೀವಿಗಳಿಗಿಲ್ಲದ ಒಂದು ವಿಶಿಷ್ಟತೆ ಮಾನವನಲ್ಲಿದೆ. ಅದೇ ಒಳಿತು-ಕೆಡಕುಗಳ ನ್ಯಾಯಾನ್ಯಾಯಗಳ ಕುರಿತು ತನ್ನ ಬುದ್ಧಿಶಕ್ತಿಯಿಂದ ವಿವೇಚಿಸಬಲ್ಲ ವಿವೇಕಶಕ್ತಿ. ಇದನ್ನು ಬಳಸಿ ದಮೆ, ಕ್ಷಮೆ, ದಯೆ, ಸಮತೆ, ಶಾಂತಿ, ಸಂತೋಷ ಮೊದಲಾದ ಗುಣಗಳನ್ನು ಹೊಂದಿದವನಾಗಿ ಬಾಳಬೇಕಾದುದು ಮಾನವನ ಕರ್ತವ್ಯ. ಆದರೆ ಇಂತಹ ವಿಶಿಷ್ಟ ಶಕ್ತಿಯಿದ್ದರೂ ಮಾನವ ಹೇಗಿರುತ್ತಾನೆ, ಯಾವರೀತಿ ವರ್ತಿಸುತ್ತಾನೆ, ಹೇಗೆ ಬಾಳುತ್ತಾನೆ ಎಂಬುದನ್ನು ಕ್ರಿಸ್ತಾನುಯಾಯಿ ಪೌಲನು ಹೀಗೆ ಹೇಳುತ್ತಾನೆ— " ಮನುಷ್ಯರು ಸ್ವಾರ್ಥಚಿಂತಕರೂ, ಹಣದಾಸೆಯವರೂ, ಬಡಾಯಿಕೊಚ್ಚಿಕೊಳ್ಳುವವರೂ, ಅಹಂಕಾರಿಗಳೂ, ದೂಷಕರೂ, ತಂದೆ ತಾಯಿಗಳಿಗೆ ಅವಿಧೇಯರೂ ಉಪಕಾರ ನೆನೆಸದವರೂ. ದೇವಭಯವಿಲ್ಲದವರೂ, ಮಮತೆಯಿಲ್ಲದವರೂ, ಸಮಾಧಾನವಾಗದವರೂ, ಚಾಡಿಹೇಳುವವರೂ, ದಯೆಯಿಲ್ಲದವರೂ, ಉಗ್ರತೆಯುಳ್ಳವರೂ, ಒಳ್ಳೇದನ್ನು

ಪ್ರೀತಿಸದವರೂ, ದ್ರೋಹಿಗಳೂ, ದುಡುಕಿನವರೂ, ಉಬ್ಬಿಕೊಂಡಿರುವವರೂ, ದೇವರನ್ನು ಪ್ರೀತಿಸದೆ ಭೋಗಗಳನ್ನೇ ಪ್ರೀತಿಸುವವರೂ ಭಕ್ತಿಯವೇಷವಿದ್ದು ಅದರ ಶಕ್ತಿಯನ್ನು ಬೇಡವೆನ್ನುವವರೂ ಆಗಿರುತ್ತಾರೆ. ”

“ ಮಾಡಿದ ತಪ್ಪು ಅರಿವಿಗೆ ಬಾರದೆಹೋದೀತೆ ” ? ಎಂಬವೊಂದು ಗಾದೆಯಿದೆ. ಮನುಷ್ಯನಿಗೆ ತಾನುಮಾಡುವ ತಪ್ಪು ಇತರರಿಗೆ ತಿಳಿಯದಿದ್ದರೂ ಅವನ ಅಂತರಂಗಕ್ಕೆ ಮಾತ್ರ ಅದು ಅರಿವಾಗಿಯೇ ಆಗುತ್ತದೆ. ಹಾಗಿದ್ದರೂ ತನ್ನ ಸ್ವಾರ್ಥದಿಂದ ಅದನ್ನು ತೋರಗೊಡದೆ, ತಾನು ಮಾಡುವುದು ಸರಿಯಾದುದೇ ಆಗಿದೆಯೆಂದು ತೋರಿಸಿಕೊಂಡು ವರ್ತಿಸುತ್ತಾನೆ. ಹಾಗೆಮಾಡದೆ ತನ್ನಮನಸ್ಸಿಗೆ ತಪ್ಪೆಂದು ಕಂಡುಬಂದಾಗ, ತಾನದನ್ನು ಮಾಡಬಾರದೆಂದು ಆತ ಯೋಚಿಸುವುದು ಮಾತ್ರವಲ್ಲ, ಆರೀತಿ ಮಾಡಲೂಬಾರದು ಆರೀತಿ ಅವನು ವರ್ತಿಸಿದಲ್ಲಿ ಅವನ ವರ್ತನೆ ನೈಜವೂ, ಸರ್ವಕಾಲಿಕವೂ, ವಿಚಾರಾಧಾರಿತವೂಆಗಿ, ಪರರ ಸುಖ-ದುಃಖದ ಕಲ್ಪನೆಗಳನ್ನಳವಡಿಸಿಕೊಂಡಿದ್ದು ಬಾಳಿನ ಮೌಲ್ಯವನ್ನು ಎತ್ತಿಹಿಡಿಯುವಂತದೇ ಆದಲ್ಲಿ, ಆದೇಜೀವನವನ್ನು ಬೆಳಗುವ ಕೈದೀವಿಗೆ ಯಾಗಿ ಅವನ ಮನೋವಿಕಾಸಕ್ಕೆ ಅವಕಾಶವನ್ನು ಒದಗಿಸುವುದಷ್ಟೇಅಲ್ಲ, ಆತನ ಚಾರಿತ್ರ್ಯದ ಉನ್ನತಿಗೆ ಕಾರಣವಾಗುತ್ತದೆ. ಅದೇ ಅದು ಸ್ವಾರ್ಥಭರಿತವೂ, ಅವಿವೇಕಯುತವೂ ಅವಿಚಾರಿತವೂ ಆದರೆ ಅದರಿಂದ ವ್ಯಕ್ತಿಯೂ ಕೆಟ್ಟು ಸಮಾಜವೂ ಹಾಳಾಗುವುದು. ಅವನ ಈ ರೀತಿಯ ವರ್ತನೆ ಭಯೋತ್ಪಾದಕರ ಕೈಯಲ್ಲಿರುವ ಕೋವಿಯಾಗಿ ಕಂಡ ಕಂಡವರನ್ನೆಲ್ಲ ಸುಡುವ ಸಾಧನವಾಗುವುದು. ಇವುಗಳಲ್ಲಿ ತಾನು ಯಾವುದನ್ನು ಅನುಸರಿಸಬೇಕು ಎಂಬುದನ್ನು ಚಿಂತಿಸುವುದಕ್ಕೇನೇ ಅವನಿಗೆ ದೊರಕಿಸಿರುವ ಅಮೂಲ್ಯ ಸಂಪತ್ತು ವಿವೇಕ. ಇದು ಅವನ ಪಾಲಿಗೆ ಚಿಂತಾಮಣಿ ಅನರ್ಘ್ಯರತ್ನವಾದ ಈ ವಿವೇಕಶಕ್ತಿಯನ್ನು ಬಳಸಿಕೊಂಡು ಪರಿಸ್ಥಿತಿ, ಪರಿಸರ, ಸನ್ನಿವೇಶ, ಸಂದರ್ಭಗಳಲ್ಲಿ ನ್ಯಾಯೋಚಿತ ರೀತಿಯಲ್ಲಿ ಸಮಾಜಹಿತದ ಕಾರ್ಯದಲ್ಲೂ ಅಳವಡಿಸಿಕೊಂಡಾಗ ಅದೇ ಮಾನವ ಧರ್ಮವೆಂದೆನಿಸುವುದು. ಇದನ್ನು ಪರಿಪಾಲಿಸಿದಾಗಲೇ ಅವನ ಮನುಷ್ಯತ್ವದ ಹಿರಿಮೆ-ಗರಿಮೆ ಮರೆಯಲವಕಾಶವಾದೀತು. ಇಲ್ಲವಾದರೆ ಆತ ಉಳಿದೆಲ್ಲ ಪ್ರಾಣಿಗಳಂತೆ ತಾನೂ ಒಬ್ಬನಾಗಿ ಅಲ್ಪನಾಗ ಬೇಕಾಗುತ್ತದೆ. ಹೀಗಾಗಬಾರದು ತನ್ನ ಹಿರಿಮೆಯನ್ನು ಮನುಷ್ಯ ಕಾಯ್ದುಕೊಳ್ಳಬೇಕು ತನ್ಮೂಲಕ ಯಶಸ್ಸನ್ನು ಗಳಿಸಿಕೊಳ್ಳಬೇಕು. ಎಂಬುದನ್ನು ಮನಗಾಣಿಸಲೆಂದೇ ಮನುಷ್ಯತ್ವದ ಶ್ರೇಷ್ಠತೆಯನ್ನು ಪುರಾತನ ಕಾಲದಿಂದಲೂ ಘೋಷಿಸಿಕೊಂಡು ಬಂದಿರುವುದು.

ಮನುಷ್ಯತ್ವ ಅಥವಾ ಮಾನವ ಧರ್ಮ ಪ್ರಕಟವಾಗಲು ಅದಕ್ಕೆ ಅದರದ್ದೇ ಆದ ರೀತಿ-ನೀತಿ ಇದೆ, ಆಚಾರ-ವಿಚಾರವಿದೆ. ಇದನ್ನು ಅಳವಡಿಸಿಕೊಂಡು ಬಾಳಬೇಕಾದುದು ಮಾನವಧರ್ಮ. ಧರ್ಮವೆಂದರೆ ವಸ್ತುವಿನ ಸ್ವಭಾವ. ಸುಡುವುದು



ಬೆಂಕಿಯ ಧರ್ಮ ಕಚ್ಚಾಡುವುದು ನಾಯಿಯ ಧರ್ಮಎಂಬಂತೆ, ಗುಣಾವಗುಣಗಳ ಚಿಂತನೆ ನರನ ಧರ್ಮ ಇತ್ಯಾದಿ. ಹಾಗೆಯೇ ಧರ್ಮವೆಂದರೆ ಆಚಾರ ಅಥವಾ ಚಾರಿತ್ರವೆಂದು ಮತ್ತೊಂದು ಅರ್ಥ. ಈ ಎರಡರಲ್ಲಿ ಸ್ವಭಾವ ರೂಪವಾದ ಧರ್ಮ ಜಡವಿರಲಿ, ಚೇತನವಿರಲಿ ಎಲ್ಲ ಪದಾರ್ಥಗಳಲ್ಲಿಯೂ ಇರುತ್ತದೆ. ಏಕೆಂದರೆ ಏನೊಂದೂ ಸ್ವಭಾವವಿಲ್ಲದ ವಸ್ತು ಈ ಪ್ರಪಂಚದಲ್ಲಿ ಇಲ್ಲವೇ ಇಲ್ಲ ಎಂದು ಹೇಳಲಾಗಿದೆ. “ ವದಂತಿ ವರ್ಣ್ಯಾವರ್ಣ್ಯಾನಾಂ ಧರ್ಮೈಕ್ಯಂ ದೀಪಕಂ ಬುಧಾಃ ” ಪ್ರಸ್ತುತ ಅಪ್ರಸ್ತುತ ವಾದವುಗಳೆರಡರಲ್ಲೂ ಧರ್ಮೈಕ್ಯವು ದೀಪಕವಾಗುತ್ತದೆ ಎಂದು ದೀಪಕಾಲಂಕಾರದ ಲಕ್ಷಣವನ್ನು ಹೇಳುವಲ್ಲಿ ಪ್ರತಿಯೊಂದರಲ್ಲೂ ಅದರದ್ದೇ ಧರ್ಮ-ಸ್ವಭಾವವಿರುತ್ತದೆ ಯೆಂಬುದನ್ನು ಮನಗಾಣಿಸಿಕೊಟ್ಟಿರುವುದನ್ನು ದರ್ಶಿಸಬಹುದಾಗಿದೆ. ಇದರಿಂದ ಪ್ರತಿಯೊಂದಕ್ಕೂ ಪ್ರತಿಯೊಬ್ಬರಿಗೂ ತಮ್ಮದೇ ಆದ ಗುಣ ಧರ್ಮವಿದೆ ಯೆಂಬುದು ಸ್ಪಷ್ಟವಾಯಿತು. ಆದರೆ ಇದಕ್ಕೆ ಅಂದರೆ ಸ್ವಭಾವಕ್ಕೆ ಮೀರಿದ ಆಚಾರ ಅಥವಾ ಚಾರಿತ್ರ ರೂಪವಾದ ಧರ್ಮವೊಂದಿದೆ. ಅದು ಕೇವಲ ಚೇತನವಿರುವಲ್ಲಿ ಕಂಡು ಬರುವಂತಹದ್ದು. ಇಂತಹ ಚಾರಿತ್ರರೂಪವಾದ ಧರ್ಮವೇ ಮಾನವ ಧರ್ಮ. ಅದೇ ಮನುಷ್ಯತ್ವದ ಪ್ರತೀಕ. ಅದಕ್ಕಾಗಿಯೇ “ಆಚಾರವರಿಯಿರಿ, ವಿಚಾರವರಿಯಿರಿ” ಎಂದಿದ್ದರು ಬಸವಣ್ಣನವರು. ಮಾನವನಾಗಿ ಹುಟ್ಟಿದ ಮೇಲೆ ಆತ.

ಲೇಸೆನಿಸಿಕೊಂಡು ಐದು ದಿನ ಬದುಕಿದರೇನು ?  
ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು ?  
ಲೇಸೆನಿಸಿಕೊಂಡು ಮೂರು ದಿನ ಬದುಕಿದರೇನು ?  
ಲೇಸೆನಿಸಿ ಕೊಂಡು ಎರಡುದಿನ ಬದುಕಿದರೇನು ?  
ಕೂಡಲ ಸಂಗನ ಶರಣರ ವಚನದಲ್ಲಿ  
ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನು ?

ಸಾಲದೇ ? ಅಂದರೆ ಮಾನವನಾಗಿ ಹುಟ್ಟಿದ ಮೇಲೆ ಆತ ಲೇಸೆನಿಸಿಕೊಂಡು ಬಾಳಬೇಕು. ಒಂದು ದಿನದ ಮಟ್ಟಿಗಾದರೂ ಆತ ಲೇಸೆನಿಸಿಕೊಂಡು ಬದುಕಿದರೆ ಸಾಕು ಎಂದು ಹೇಳಿರುವ ಈ ಮಾತಿನಲ್ಲಿ ಲೇಸೆನಿಸಿ ಬದುಕುವುದು ಎಷ್ಟು ಕಷ್ಟ ಸಾಧ್ಯವೆಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರಲ್ಲವೆ ? ಇಲ್ಲಿ ಮನುಷ್ಯನಲ್ಲಿರುವ ಪಶುತ್ವ ಮಾಯವಾಗಿ ಮನುಷ್ಯತ್ವ ಬೆಳಗಿದಾಗ ಮಾತ್ರ ಆತ ಲೇಸೆನಿಸಿಕೊಂಡು ಬದುಕಲು ಸಾಧ್ಯವಾಗುತ್ತದೆ. ಪಶುತ್ವದಿಂದ ಹೊರ ಬಂದು ಆತ ಮಾನವನಾಗಿ ಬಾಳಲು ಅನುಸರಿಸ ಬೇಕಾದ ನೀತಿ-ನಿಯಮಗಳು, ಆಚಾರ-ವಿಚಾರಗಳಿವೆಯೆಂದು ಹಿರಿಯರ ಕಾಲದಿಂದಲೂ ತಿಳಿಯ ಪಡಿಸಿದ ಹೇಳಿಕೆಗಳಿವೆ. ಸತ್ಯ, ಅಹಿಂಸೆ, ದಯೆ, ಅಸ್ತೇಯ, ಅಪರಿಗ್ರಹಾದಿ ಆಚರಣೆಗಳೂ, ಶೀಲ, ಸನ್ನಡತೆ, ಸಜ್ಜನಿಕೆ, ತನ್ನಂತೆ ಪರರನ್ನು

ಕಾಣುವುದು, ಪರೋಪಕಾರ ಭಾವನೆ ಇತ್ಯಾದಿ ತನಗೂ ಸಮಾಜಕ್ಕೂ ಒಳಿತಾದುದೆಲ್ಲವೂ ಏನೇನಿವೆಯೋ ಅವುಗಳಂತೆ ಪ್ರವೃತ್ತಿಸಿ ಅಂತರಂಗ ಬಹಿರಂಗಗಳೆರಡರಲ್ಲೂ ಶುದ್ಧಿಯಾಗಿರುವುದು ಮಾನವ ಧರ್ಮ. ಬಸವಣ್ಣನವರ ವಚನದಲ್ಲಿ ಹೇಳುವುದಾದರೆ " ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯ ಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮದೇವರ ನೊಲಿಸುವ ಪರಿ. " ಕವಿ ಲಕ್ಷ್ಮೀಶನ ಮಾತಿನಲ್ಲಿ ಹೇಳುವುದಾದರೆ ಪರರ ಸಂಪತ್ತನ್ನು ಬಯಸದೆ, ತನ್ನ ಹಿರಿಮೆಗೆ ಭಂಗಬಾರದಂತೆ, ತನ್ನ ವಂಶದ ಕ್ರಿಯೆಗಳಿಗೆ ದೂಷಣವು ಬಾರದೆ, ವಿಶೇಷ ಗುಣಗಣ ಕಲಾಗೌರವಗಳು ತೀರದೆ, ದುರುಕ್ತಿಗಳಿಗೆ ಸೇರದೆ, ಸುಮಾರ್ಗದಲ್ಲಿ ನಡೆಯುವುದಾಗಿದೆ. ' ಶ್ಲೋಕಾರ್ಧೇನ ಪ್ರವಕ್ಷಾಮಿಯದುಕ್ತಂ ಗ್ರಂಥ ಕೋಟಿಭಿಃ। ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" "ಎಂಬ ವ್ಯಾಸೋಕ್ತಿಯಂತೆ ವರ್ತಿಸುವುದಾಗಿದೆ." ದುಃಖಿತೇ ಕುರುದಯಾಂ ಏತತ್ ಸತಾಂ ಲಕ್ಷಣಂ" ದುಃಖಿತರಾದವರ ಮೇಲೆ ದಯೆದೋರಿಸು, ಇದೇ ಸಜ್ಜನರ ಲಕ್ಷಣ ಎಂಬಂತೆ ನಡೆಯುವುದಾಗಿದೆ. ಕೃಪೆಗೆ ಹೊರತಾದ ಧರ್ಮಯಾವುದಿದೆ? 'ಕ್ಷಾಂತಿ ತುಲ್ಯಂ ತಪೋ ನಾಸ್ತಿ ಸಂತೋಷಾತೆನ ಪರಂ ಸುಖಂ। ನಾಸ್ತಿ ತೃಷ್ಣಾ ಪರೋವ್ಯಾಧಿರ್ನಚಧರ್ಮೋ ದಯಾಪರಃ॥ ಕ್ಷಮಾ ಗುಣಕ್ಕೆ ಸರಿಯಾದ ತಪಸ್ಸಿಲ್ಲ. ಸಂತೋಷಕ್ಕೆ ಸರಿಯಾದ ತೃಪ್ತಿಯಿಲ್ಲ, ಆಸೆಯಂತಹ ಕಾಯಿಲೆ ಬೇರೊಂದಿಲ್ಲ, ದಯೆಯನ್ನು ಹೊರತು ಪಡಿಸಿದ ಧರ್ಮವೇ ಇಲ್ಲ ಎಂಬೀ ಸೂಕ್ತಿಯಾಗಲಿ, 'ಅಕೃತ್ವಾ ಪರಸಂತಾಪಂ ಅಗತ್ವಾಖಲನಮ್ರತಾಂ" ಅನತ್ಸೃಜ್ಯ ಸತಾಂ ಮಾರ್ಗಂಯತ್ ಸ್ವಲ್ಪಮಪಿ ತದ್ಬಹು, ಬೇರೆಯವರಿಗೆ ಪೀಡನೆಯನ್ನುಂಟು ಮಾಡದೆ, ದುಷ್ಟರಿಗೆ ತಲೆಬಾಗದೆ, ಸಜ್ಜನರ ಸದಾಚಾರದ ದಾರಿ ಬಿಡದೆ ಇರುವ ಧೀರ ವೃತ್ತಿಯುಪರು ಗಳಿಸಿದ್ದು ಸ್ವಲ್ಪವಾದರೂ ಹೆಚ್ಚಿನದಾಗಿ ಪರಿಣಮಿಸುವುದು ಎಂದು ಶಾಙ್ಗ್ರದರ ಪದ್ಧತಿಯಲ್ಲಿನ ಈ ಹೇಳಿಕೆಯಾಗಲಿ, ಎಲ್ಲವೂ ಮಾನವ ಧರ್ಮವನ್ನು ತೋರಿಸಿ ಕೊಟ್ಟಿದೆ. ಆದುದರಿಂದ ಭೂತಂಗಳೊಳನುಕಂಪೆ, ಸಕಲ ಜೀವಾಳಿಗೆ ಲೇಸ ಬಯಸಿ ಜನ್ಮ "ಸಾರ್ಥಕ ಪಡಿಸಿ ಕೊಳ್ಳುವುದೇ"ಮಾನವ ಧರ್ಮ." ಸರ್ವ ಜೀವ ದಯಾಪಾರಿಯಾದಲ್ಲಿ ಕೂಡಲ ಸಂಗಮದೇವನು ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ ?

ಈ ಮಾನವ ಧರ್ಮವನ್ನು ಮಾನವನು ತಾನು ಆಚರಿಸದೆ ಹೋದರೆ ಆತ ದಾನವನಾಗಿ ಪರಿಗಣಿಸುತ್ತಾನೆ. ಆದರಿಂದ "ಧರ್ಮೇನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿವತೃತ". ಧರ್ಮ ಮರೆಯಾದರೆ ಇಡಿಯ ಸಮಾಜವನ್ನು ಅಧರ್ಮವೇ ಆಕ್ರಮಿಸಿ ಬಿಡುತ್ತದೆ ಎಂದು ಭಗವದ್ಗೀತೆಯಲ್ಲಿ ಸಾರಿದಂತೆ ಮನುಕುಲ ಅಧೋಗತಿಗಿಳಿಯುವಂತಾಗುತ್ತದೆ. ಮಾನವ ಪ್ರಯತ್ನಿಸಿದರೆ ದೇವನಾಗಬಹುದು, ಇಲ್ಲವೇ ದಾನವನಾಗಬಲ್ಲನು. ಆದರೆ ಮಾನವನು ಮಾನವನಾಗಿ ಬಾಳುವುದಕ್ಕೆ ಬಹಳವಾಗಿ ಸಾಧನೆ ಮಾಡಬೇಕಾಗುತ್ತದೆಯೆಂದು ಹಿರಿಯರು ಹೇಳಿದುದನ್ನು ಚಿಂತಿಸಿದರೆ ನೈಜಮಾನವನಾಗಿ ಬಾಳುವುದು ಸುಲಭ ಸಾಧ್ಯವಲ್ಲವೆಂಬುದು ಗಮನಕ್ಕೆ ಬಾರದೆ ಹೋಗದು. ಅವರ ಮಾತಿನ ಸತ್ಯಾರ್ಥ ಇಂದು ಎಲ್ಲೆಲ್ಲಿಯೂ ತಾಂಡವವಾಡುತ್ತಿರುವ ಹಿಂಸಾರತಿಯನ್ನು ಕಂಡಾಗ ಮಾನವ ಮಾನವನಾಗದೆ, ತನ್ನ ಮನುಷ್ಯತ್ವವನ್ನು ತ್ಯಜಿಸಿ ದಾನವನಾಗುತ್ತಿದ್ದಾನೊ ಎಂದು ಯೋಚಿಸುವ ಸ್ಥಿತಿ ನಿರ್ಮಾಣವಾಗಿದೆ. ಬಸವಣ್ಣನವರು ಬೋಧಿಸಿದ "ವಿದ್ಯೆ, ಗುಣ, ಜ್ಞಾನ, ಧರ್ಮ, ಆಚಾರ ಶೀಲಂಗಳ ನಮ್ಮ ಕೂಡಲ ಸಂಗನ ಶರಣರು ಸಾಧಿಸಿದ ಸಾಧನೆಯನ್ನೇ ಸಾಧಿಸುವುದು" ಎಂಬುದು ಇಂದು ಕಣ್ಮರೆಯಾಗುತ್ತಿದೆಯೆಂದೆನಿಸುತ್ತದೆ. 'ವಿದ್ಯಾ ದಿವಾದಾಯ, ಧನಂಮದಾಯ, ಬಲಂ ಪರಪೀಡನಾಯ' ಎಂಬ ವಿಕೃತಸ್ಥಿತಿ ಏರ್ಪಟ್ಟಿದೆಯೆಂಬುದಾಗಿದೆ. 'ಮನೆಯೊಳಗೆ ಮನೆಯೊಡೆಯ ನಿದ್ದಾನೊ ಇಲ್ಲವೊ? ಹೊಸ್ತಿಲಲ್ಲಿ ಹುಲ್ಲುಹುಟ್ಟಿ, ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ? ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ, ಮನೆಯೊಳಗೆ ಮನೆಯೊಡಯನಿಲ್ಲ ಕೂಡಲ ಸಂಗಮದೇವಾ" ಎಂದು ಬಸವಣ್ಣನವರು ಹೇಳಿದ ಪರಿಯಂತೆ ಮಾನವನ ಹೃದಯದಲ್ಲಿ ನೆಲೆಸಿದ ಶಿವತ್ವ ಮರೆಯಾಗಿದೆಯೆಂಬಂತಾಗಿದೆ. ಇಂದು ಬಾಹ್ಯ ಪರಿಸರ ಮಲಿನವಾದಂತೆಯೇ ಆಂತರಿಕ ಪರಿಸರವೂ ಮಲಿನವಾಗ ತೊಡಗಿದೆ. ನೈತಿಕ ಅಧಃಪಾತಾಳದತ್ತ ಶೀಲಬಲ ಸರಿಯಲು ಪ್ರಾರಂಭಿಸಿದೆ. ಸಚ್ಚಾರಿತ್ರ ನಾಮಾವಶೇಷವಾಗ ಹತ್ತಿದೆ. ಕುರಿಗಳಾ ಕಳಕೊಳ್ಳ ತೊಡಗಿದೆ, 'ಅರೆದಾರು, ಮೊರೆದಾರು, ಉರಿದಾರು ಜಗದೊಳಗೆ। ಕುರಿಗಳಾ ತಲೆಯ ತರಿದಂತೆ ರಕ್ತವನು ಸುರಿದಾರು ಸರ್ವಜ್ಞ" "ಎಂಬ ಸರ್ವಜ್ಞನ ಕಾಲಜ್ಞಾನ ನುಡಿಯ ಸತ್ಯತೆ ಸರ್ವತ್ರ ಕಂಡುಬರುತ್ತಿದೆ. ಅಂದರೆ ಮನುಷ್ಯತ್ವಕ್ಕೆ ಕರಾಳ ಛಾಯೆಯೊಂದು ಮುಸುಕಲಾರಂಭಿಸಿದೆ. ಈ ಕರಾಳ ಛಾಯೆಯ ಪರಿಸರ ವಿಕಾಸವಾಗುತ್ತ ಹೋದಲ್ಲಿ ಸರ್ವತ್ರ ಅಸುರ ರಾಜ್ಯ ಸ್ಥಾಪನೆಯಾಗಿ, ಆಚಾರ-ವಿಚಾರಗಳೆಲ್ಲ ನಷ್ಟವಾಗಿ ರಾಕ್ಷಸೀತನ ಮೆರೆದು ಸಚ್ಚಾರಿತ್ರ್ಯ ಹೇಳಹೆಸರಿಲ್ಲದಂತಾದೀತು. ಹೀಗಾದರೆ ಮನುಕುಲದ ಏಳಿಗೆ ಹೇಗೆ ? ಎಂತು? ಎಂಬುದನ್ನು ಮಾನವರಾದ ನಾವು ಈಗಲೇ ಮಾರ್ಗಕಂಡು ಹಿಡಿಯದಿದ್ದರೆ ಮುಂದಿನ ಪೀಳಿಗೆ ನಮ್ಮನ್ನು ಕ್ಷಮಿಸಲಾರದು. ಆದ್ದರಿಂದ ನಾವಿಂದು ಮಹರ್ಷಿ ಅರವಿಂದರು ಸಾಧಿಸಿದ ಅತಿಮಾನವತ್ವವನ್ನು ಧರೆಯಲ್ಲಿ ಪ್ರತ್ಯಕ್ಷೀಕರಿಸುವುದಕ್ಕೆ, ನರನು ನಾರಾಯಣನಾಗುವುದಕ್ಕೆ, ಮಾನವನು ಸದಾಶಿವನಾಗುವುದಕ್ಕೆ ಪಶುತ್ವನೀಗಿಸಿ ಪಶುಪತಿಯಾಗುವುದಕ್ಕೆ ಬೇಕಾದ ವಾತಾವರಣವನ್ನು ನಿರ್ಮಾಣ ಮಾಡುವತ್ತ ಶ್ರಮಿಸಬೇಕಾಗಿದೆ. ಅಂತರಂಗದಲ್ಲಿ ಶಿವನನ್ನು ನೆಲೆಗೊಳಿಸುವತ್ತ ನಮ್ಮ ಸಾಧನೆ ಸಾಗಬೇಕಾಗಿದೆ. ಸರ್ವರ ಮನೋಭಾವ ವಿಶ್ವವಿಶಾಲ-ವಿಸ್ತಾರವಾಗಬೇಕೇ ಹೊರತು ಸಂಕುಚಿತ ಸ್ವಾರ್ಥಭರಿತವಾಗಬಾರದು. ಮಾನವ ಮಾನವನಾಗಿ ಬಾಳಿ

ಬದುಕಿ ತನ್ನ ಧರ್ಮವಾದ ಮನುಷ್ಯತ್ವದ ರಕ್ಷಣೆಯನ್ನು ಮಾನವನೇ ಮಾಡದಿದ್ದಲ್ಲಿ ಮತ್ತಾವ ಜೀವಿ ಮಾಡೀತು ! 'ಧರ್ಮೋ ರಕ್ಷತಿ ರಕ್ಷಿತಃ' ನಾವು ನಮ್ಮ ಮನುಷ್ಯತ್ವದ ಧರ್ಮವನ್ನು ರಕ್ಷಿಸಿದರೆ, ಆ ಧರ್ಮ ನಮ್ಮನ್ನು ರಕ್ಷಿಸುತ್ತದೆ ಎಂಬುದನ್ನು ಮರೆಯದಿರೋಣ, ಅದಕ್ಕಾಗಿ ಬೇಕಾದ ಧೀಶಕ್ತಿ ಸಾಮರ್ಥ್ಯ ನಮ್ಮಲ್ಲಿಲ್ಲವೆ ? ಆಲಿಸಿ ಕವಿವರ ಬೇಂದ್ರೆಯವರ ನುಡಿ.

ನಿದ್ದೆಯಲಿ ಬಿದ್ದೇಕೆ ಆತ್ಮವೇ ಏಳು ಆಳದಿಂದ
ಏಳು ಏಳು ಜಮದಗ್ನಿ ಲಿಂಗವೇ ದೇವ ಕಿರಣದಿಂದ
ದೇವ ಜನಿತ ನೀನೆನಿಸಿ ಏಳು, ತಿಳಿ ನೀನು ಮರಣರಹಿತ
ಕಾಲಮೀರಿ ನೀಮರಳು ನಿನಗಿಹುದು ಅಮರ ಪಟ್ಟವಿಹಿತ|

# ಶ್ರಾವಣ ಮಾಸದ ಮಹತ್ವ

ಸಾಲೀಮಠ ದೊಡ್ಡಯ್ಯಶಾಸ್ತ್ರಿ, ರಾಣಿಪೇಟೆ, ಹೊಸಪೇಟೆ, ಬಳ್ಳಾರಿ ಜಿಲ್ಲೆ.

ವರ್ಷದೊಳಗಿನ ಹನ್ನೆರಡು ಮಾಸಗಳಲ್ಲಿ ಶ್ರಾವಣ ಮಾಸವು ತುಂಬಾ ಪವಿತ್ರವಾದ ಮತ್ತು ದೇವರ ಕೃಪೆಗೆ ಪಾತ್ರವನ್ನಾಗಿಸುವ ಶ್ರೇಷ್ಠ ಮಾಸವಾಗಿದೆ. ಈ ಪುಣ್ಯತರವಾದ ಶ್ರಾವಣ ಮಾಸ ಶಿವನ, ಶಿವಶರಣರ ಪಾವನ ಚರಿತ್ರೆಯನ್ನು ಶ್ರವಣ ಮಾಡಲು ತಕ್ಕುದಾಗಿದೆ. ಶ್ರವಣ ಎಂದರೆ ಕೇಳು ಎಂದರ್ಥ. ಈ ಶ್ರಾವಣ ಮಾಸದಲ್ಲಿ ಪುರಾಣ, ಪ್ರವಚನ, ಕೀರ್ತನೆ, ಭಜನೆಯನ್ನು ಕೇಳಿ ಆತ್ಮೋದ್ಧಾರ ಮಾಡಿಕೊಳ್ಳುವುದೇ ಈ ಮಾಸದ ಉದಾತ್ತ ಉದ್ದೇಶವಾಗಿದೆ. ಈ ತಿಂಗಳಿನ ಆದ್ಯಂತ ಎಲ್ಲೆಡೆ ಮಠ ಮಂದಿರಗಳಲ್ಲಿ ಜ್ಞಾನವನ್ನೀಡಿ ಹುಟ್ಟಿ ಬಂದ ಗುಟ್ಟನ್ನು ಅರುಹಿ ಮಾನವ ಜನ್ಮದ ಪರಮ ಚರಮ ಗುರಿಯನ್ನು ತಿಳಿಸುತ್ತಾರೆ.

ನವವಿಧ ಭಕ್ತಿಗಳಲ್ಲಿ ಶ್ರವಣ ಭಕ್ತಿ ಪ್ರಥಮವಾಗಿದೆ. ಇದೇ ಪಾರಮಾರ್ಥಿಕ ದಿವ್ಯ ಭವ್ಯ ಮಂಟಪವನ್ನೇರಲು ಮೊದಲನೆಯ ಸೋಪಾನವಾಗಿದೆ. ಪುರಾಣ ಕೀರ್ತನೆಯನ್ನು ಆಲಿಸುವುದರಿಂದ ಹಲವು ತರಹದ ಲಾಭವುಂಟಾಗುತ್ತದೆ. ಈ ಮಾತಿಗೆ ಪುಷ್ಟಿಯನ್ನೀಡಲು ಒಬ್ಬ ಸುಭಾಷಿತಕಾರನು ಹೀಗೆ ಹೇಳಿದ್ದಾನೆ, “ ಶ್ರುತ್ವಾ ಧರ್ಮಂ ವಿಜಾನಾತಿ, ಶ್ರುತ್ವಾತ್ಯಜತಿ ದುರ್ಮತಿಂ, ಶ್ರುತ್ವಾ ಜ್ಞಾನಮವಾಪ್ನೋತಿ, ಶ್ರುತ್ವಾ ಮೋಕ್ಷಂಚ ವಿದಂತಿ’’ ಇದರರ್ಥ ಇಂತಿದೆ. ಶ್ರುತ್ವಾ ಅಂದರೆ ಕೇಳುವುದರಿಂದ ಧರ್ಮ ತಿಳಿಯುವುದು. ದುರ್ಗುಣ ದೂರವಾಗಿ ಜ್ಞಾನ ಪ್ರಾಪ್ತವಾಗುವುದು. ಪುಣ್ಯ ಶ್ರವಣದಿಂದ ಮೋಕ್ಷ ಲಭಿಸುವುದು.

ಮನುಷ್ಯನ ಜೀವನದಲ್ಲಿ ಪುರಾಣ ಪುಣ್ಯ ಕಥೆ ಕೇಳುವ ಈ ಸತ್ಸಂಗ ಶ್ರೇಷ್ಠ ಅಮೃತ ಕೊಡುಗೆಯಾಗಿದೆ, ಜೀವನವನ್ನು ಪಾವನವನ್ನಾಗಿಸಲು ದಿವ್ಯ ಸಾಧನವಾಗಿದೆ. ಅದಕ್ಕಾಗಿಯೇ ಸಂತ ತುಕಾರಾಮರವರು ತಮ್ಮದೊಂದು ಅಭಂಗದಲ್ಲಿ “ ಸಜ್ಜನ ಸಂಗತಿ ರೇಕಾ, ಭವತಿ ಭವಾರ್ಣವತಾರಣ ನೌಕಾ ” ಅಂದರೆ ಸಂತ್ಸಂಗವೆಂಬುದು ಭವ ಸಾಗರವನ್ನು ದಾಟಸುವ ನೌಕೆಯಿದ್ದಂತೆ ಎಂದು ಹೇಳಿದ್ದಾರೆ. ಇದನ್ನರಿತಾಗ ಶ್ರವಣ ಲಾಭ ಎಷ್ಟು ಮಹತ್ತರವಾಗಿದೆ ಎಂಬುದು ಮನವರಿಕೆಯಾಗುತ್ತದೆ.

ಶ್ರಾವಣ ಮಾಸದಲ್ಲಿ ಶ್ರವಣ ಮಾಡುವ ಪುರಾಣ, ಕೀರ್ತನೆಯ ಪ್ರಯೋಜನವನ್ನು ಶಿವಭಜನೆಯ ಉತ್ಕೃಷ್ಟ ಉಪಯೋಗವನ್ನೀಗ ನಾವು ತಿಳಿಯುವುದು ಯಥೋಚಿತವಾಗಿದೆ. ಪುರಾಣದಲ್ಲಿ ಪುರಾಣಿಕರು ಮಹಾತ್ಮರ ಜೀವನ ಚರಿತ್ರೆಯನ್ನು ಸವಿಸ್ತಾರವಾಗಿ ತಿಳಿಸುತ್ತಾರೆ. ಪುರಾಣ ಪುರುಷರ ಜೀವನ ಅನುಭವ ಆಧ್ಯಾತ್ಮ ಸಾಧನೆ,



ಆಚರಣೆಗಳ ಕುರಿತು ಸೊಗಸಾಗಿ ವಿವರಿಸುತ್ತಾರೆ. ಈ ಪುರಾಣದ ಪುಣ್ಯ ಶ್ರವಣದಿಂದ ಕೇಳುಗರಿಗೆ ಜ್ಞಾನ ಪ್ರಾಪ್ತಿಯಾಗುವುದಲ್ಲದೆ ತಾವೂ ಪುರಾಣ ಪುರುಷರಂತೆ ಬಾಳಬೇಕೆಂಬ ಇಚ್ಛೆಯನ್ನು ಬಲಗೊಳಿಸುತ್ತದೆ. ಶಿವಕೀರ್ತನೆಯಲ್ಲಿ ಕೀರ್ತನಕಾರರು ದಿನಕ್ಕೊಬ್ಬ ಮಹಾಪುರುಷರ ಪುಣ್ಯಸ್ತ್ರೀಯರ ಜೀವನ ಚರಿತ್ರೆಯನ್ನು ಸಂಗೀತ ಸಾಹಿತ್ಯದೊಂದಿಗೆ ಮನಮುಟ್ಟುವಂತೆ ತಿಳಿಸುತ್ತಾರೆ. ಕೀರ್ತನೆ ಕೇಳುವುದರಿಂದ ಮನಃಪರಿವರ್ತನೆ ಹೊಂದಿ ಸದ್ವರ್ತನೆ ಬೆಳೆಯಲು ಸಹಾಯಕವಾಗುತ್ತದೆ. ಈ ಶ್ರಾವಣ ಮಾಸದಲ್ಲಿ ಶಿವಭಜನೆ ಕೇಳುವುದರಿಂದ ಪುಣ್ಯ ಲಭಿಸಿ ಪಾರ-ಮಾರ್ಥಿಕದ ಪಥ ದೊರೆತು ಪರಮೇಶ್ವರನ ಕೃಪೆ ದೊರೆಯುತ್ತದೆ. ಭಜನೆಯ ಅಕ್ಷರಾರ್ಥ ಇಂತಿದೆ. ಭ–ಎಂದರೆ ಭವದ, ಜ–ಎಂದರೆ ಜಂಜಾಟದ ಎಂದರೆ ಇಲ್ಲ ಅಂದರೆ ಯಾರು ಭಕ್ತಿಯಿಂದ ಭಜನೆ ಮಾಡುವರೋ ಅಂತಹವರಿಗೆ ಭವದ ಜಂಜಾಟ ಇಲ್ಲ. ವಿಭಜನೆ ಎಂದರೆ ಬೇರೆ ಮಾಡುವುದು ಎಂದರ್ಥ ಭಜನೆ ಎಂದರೆ ಕೊಡಿಸುವುದು ಎಂದರ್ಥ. ಅಂದರೆ ಪ್ರಾಪಂಚಿಕತೆಗೆ ಅಂಟಿಕೊಂಡು ಪಾರಮಾರ್ಥಿಕತೆಗೆ ವಿಭಜನೆಯಾದ ನಮ್ಮ ಮನಸ್ಸನ್ನು ದೇವರ ಕಡೆಗೆ ಕೂಡಿಸುವುದೇ ಭಜನೆಯ ವೈಶಿಷ್ಟ್ಯವಾಗಿದೆ ಅದಕ್ಕಾಗಿ ನಾವು ಈ ಶ್ರಾವಣ ಮಾಸದಲ್ಲಿ ಪುರಾಣ, ಕೀರ್ತನೆ, ಪ್ರವಚನ ಆಲಿಸಿ ಆತ್ಮೋದ್ಧಾರ ಮಾಡಿಕೊಳ್ಳುವುದು ಸೂಕ್ತವಾಗಿದೆ.

ಶ್ರಾವಣಮಾಸದಲ್ಲಿ ಮಳೆಯಾಗುತ್ತದೆ. ಈ ಮಳೆಗೆ ಹುತ್ತತೊಯ್ದು ಅದರಲ್ಲಿದ್ದ ಹಾವುಗಳು ಹೊರಗೆ ಬರುವುದುಂಟು. ಅವುಗಳನ್ನು ದಯಾಂತ ಕರುಣೆಯಿಂದ ಕಾಣಬೇಕೆಂಬ ದೃಷ್ಟಿಯಿಂದ “ನಾಗ ಪಂಚಮಿ” ಯ ಆಚರಣೆ ಬಳಕೆಯಲ್ಲಿ ಬಂದಿದೆ. ಶ್ರಾವಣ ಮಾಸದಲ್ಲಿ ನಾಗಪಂಚಮಿ ಸರ್ವರ ಸಂತಸದ ಹಬ್ಬವಾಗಿದೆ. ಮಹಾತ್ಮರ ದರ್ಶನಕ್ಕೆ, ಜಂಗಮರ ಪುಣ್ಯಾರಾಧನೆ, ಪ್ರಸಾದ ವಿತರಣೆಗೆ ಪ್ರಸಕ್ತವಾಗಿದೆ. ಒಟ್ಟಾರೆ ಈ ಶ್ರಾವಣಮಾಸ ಕೇಳುಗರ ಮನ ಸಂತೋಷಕ್ಕೆ ಜ್ಞಾನ ವಿಕಾಸಕ್ಕೆ ಹಾಗೂ ಬಾಳಿನ ಉತ್ಕರ್ಷಕ್ಕೆ ಉತ್ತಮ ಸಾಧನವಾಗಿದೆ.

# ಕಡಿಮೆ ಹಣ ಖರ್ಚು ಮಾಡಿ

# ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾ ಬೂ ನು ಗ ಳ ನ್ನು ಇಂ ದೇ ಉ ಪ ಯೋ ಗಿ ಸಿ ರಿ

'ಕಸ್ತೂರಿ'
ಬಾರ್ ಸೋಪ್

'ಕಸ್ತೂರಿ'
ನೀಲಂ ಬಾರ್ ಸೋಪ್

ತಯಾರಕರು :

## ರಾಮಕೃಷ್ಣ ಆಯಿಲ್ ಮಿಲ್, ತುಮಕೂರು



ಸ್ಥಾಪನೆ : 1943 | ತಂತಿ : 'ವೀರಶೈವ'

ಕೆ.ಎಸ್.ಟಿ. 73606285
ಸಿ.ಎಸ್.ಟಿ. 73656288 } ದಿ 24-8-62 | ಕೇಂದ್ರ ಕಛೇರಿ : { 72866, 70204

## ವೀರಶೈವ ಸಹಕಾರ ಸಂಘ, ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆಗಳ ಮೂಲಕ ವಿತರಣೆ. ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1991-92 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 4.70 ಲಕ್ಷ
ಸರ್ಕಾರದಿಂದ ರೂ. 13.42 ಲಕ್ಷ
ಒಟ್ಟು ರೂ. 18.12 ಲಕ್ಷ

1) ಸದಸರ ಸಂಖೆ 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1540.40 ಲಕ್ಷ
3) ಆಪದ್ಧನ : ರೂ. 11.92 ಲಕ್ಷ
4) ಇತರೆ ನಿಧಿಗಳು : ರೂ. 32.00 ಲಕ್ಷ
5) 1991-92 ರಲ್ಲಿ ನಿವ್ವಳ ಲಾಭ : ರೂ. 04.05 ಲಕ್ಷ
6) ಸದಸರಿಗೆ ಸೌಲಭ್ಯಗಳು :
ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ರಿಯಾಯಿತಿ

ಮಾನ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಎಸ್. ಗಿರಿಜರವರು
12) ಶ್ರೀಮತಿಪ್ರೇಮಸೋಮಸುಂದರ್‌ರವರು
ಸರ್ಕಾರದ ಪ್ರತಿನಿಧಿ, ನಿರ್ದೇಶಕರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯನವರು
16) ಉಪನಿಬಂಧಕರು ಸಹಕಾರ ಸಂಘಗಳ
ಉಪನಿಬಂಧಕರ ಕಚೇರಿ
ಬೆಂಗಳೂರು ನಗರ ಜಿಲ್ಲೆ
17) ಶ್ರೀ ಎನ್. ಡಿ. ಹನುಮಂತರಾಯಪ್ಪ
ಬಿ. ಡಿ ಸಿ. ಸಿ. ಬ್ಯಾಂಕ್
ನಿರ್ದೇಶಕರು.
18) ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು.

ಗಮನಿಸಿ ! ಭೇಟಿಕೊಡಿ    ದೂರವಾಣಿ : 8406-8206ಹೆಳಿ

## ಸಿ. ಆರ್. ರೇವಣ್ಣಗುರುಸಿದ್ದಪ್ಪ

ಮಂಡಿಪೇಟೆ, ತುಮಕೂರು-572101.

ಮಾರಾಟಗಾರರು !

**ಉಕ್ಕು, ಕಬ್ಬಿಣ ಸಾಮಾನುಗಳು, ಬಣ್ಣಗಳು, ಎ. ಸಿ. ಶೀಟ್ ಪೈಪ್ಸ್, ಸಿಮೆಂಟ್ಸ್ ಮತ್ತು ಸ್ಯಾನಿಟರಿ ಉಪಕರಣಗಳು.**

## C. R. Revanna Gurusiddappa

MANDIPET, TUMKUR-572101.
KARNATAKA

## SRI DHANACHAKRA DEPOSIT SCHEME

AUNIQUE FIXED DEPOSIT
WITH MAXIMUM FLEXIBLE FEATURES

- Automatic Renewal
- Higher Rate of Return
- Pass Book Facility

*Branch at :* Batawadi, Tumkur-3. Phone 78943



**THE Dhanalakshmi Bank Limited.**

REGD : OFFICE. THRISSUR,



ಸ್ಥಾಪನೆ : 1915    ತಂತಿ : "ಹ್ಯಾಪಿಮೂನ್"

## ಶಾಸ್ತ್ರೋಕ್ತವಾಗಿ ತಯಾರಿಸಿದ ಸುಗಂಧ ಸಾಮಗ್ರಿಗಳು

ಪ್ರಖ್ಯಾತವಾದ
- ಪರಿಮಳದಶಾಂಗ
- ದೂಪದ ಕೊಡ
- ವಿಭೂತಿ
- ಹವನ ಸಾಮಗ್ರಿಗಳ ತಯಾರಕರು




ಶಿವಪೂಜಾ ಸಾಮಗ್ರಿಗಳು ದೊರೆಯುತ್ತದೆ.




ಫೋನ್ : ಅಂಗಡಿ — 28009 ಮನೆ — 224623.

ವೈ. ಬಸಪ್ಪ, 206 ಅವೆನ್ಯೂ ರಸ್ತೆ, ಬೆಂಗಳೂರು-560 002.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ, 572104.